ನೂತನ

# ಇತಿಹಾಸ ಕೈಪಿಡಿ.



೧ ನೆಯ ಭಾಗ

●

ಬರೆದವರು

**ಎಚ್. ಎಸ್. ದೂಡಿಹಳ್ಳಿ,** ಬಿ ಎ., ಬಿ ಟಿ, ಡಿ. ಬಿ. ಇ.

ಅಧ್ಯಾಪಕರು ಕ. ಎ. ಬೋರ್ಡ್ಸ ಟ್ರೇನಿಂಗ ಕಾಲೇಜ, ಧಾರವಾಡ.

ಇತಿಹಾಸ, ಭೂಗೋಲ, ಶಿಕ್ಷಣ ಕೈಪಿಡಿಗಳ ಲೇಖಕರು.

●

ತಿದ್ದಿ ಬೆಳಸಿದ ದ್ವಿತೀಯ ಮುದ್ರಣ

ಮಾರ್ಚ ೧೯೫೧

●

ಬೆಲೆ ೧—೮—೦

# ಮೊದಲ ಮಾತು

ಸ್ವರಾಜ್ಯ ಪ್ರಾಪ್ತಿಯ ನಂತರ ನಡೆದ ಒತ್ತರದ ಕ್ರಾಂತಿಗಳು ಶಿಕ್ಷಣ ಕ್ಷೇತ್ರದಲ್ಲಿ ಒಡೆದು ಕಾಣುವಂತಾಗಿವೆ. ನೂತನ ದೃಷ್ಟಿಕೋನಕ್ಕೆ ಸರಿಹೋಗುವಂತೆ ನಮ್ಮ ನಾಡಿನ ಚರಿತ್ರೆಯಲ್ಲಿಯ ಅಂಶಗಳನ್ನು ಆರಿಸಿಕೊಂಡು, ಬಾಲಕರ ಮುಂದಿರಿಸಿ, ಗಳಿಸಿದ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಅವರು ಬಾಳುವಂತೆ ಮಾಡುವದು ಇಂದು ಇತಿಹಾಸ ಶಿಕ್ಷಣದ ಗುರಿಯಾಗಿದೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಮುಂದಿನ ಪೀಳಿಗೆಯನ್ನು ಮಾರ್ಗದರ್ಶಿಸುವ ಹೊಣೆ ಹೊತ್ತ ಶಿಕ್ಷಕರಿಗಂತೂ ಇತಿಹಾಸದ ಅರಿವು ಮತ್ತು ಅದರ ಬೋಧನೆಯ ಮಾರ್ಗಗಳು ಆಳವಾಗಿ ತಿಳಿದಿರುವದುಚಿತವು.

ಶಿಕ್ಷಕರ ತರಬೇತಿ ವರ್ಗಗಳಲ್ಲಿ ಅಧ್ಯಾಪನ ಕೈಕೊಂಡ ಗುರುಗಳಿಗೆ ಮೇಲೆ ಹೇಳಿದ ಮಾತು ಬಹಳ ಗಮನಾರ್ಹವಾದುದು. ಭಾರತದ ಚರಿತ್ರೆಗೆ ಜಾಗತಿಕ ಇತಿಹಾಸವು ನೀಡುವ ಸಹಾಯ ಮತ್ತು ಮನೋಹರ ಹಿನ್ನೆಲೆಗಳನ್ನು ವಿದ್ಯಾರ್ಥಿಯು ಮನಗಂಡು, ತಾಯ್ನಾಡಿನ ಪ್ರಗತಿಗಾಗಿ ಅವನು ಹೆಣಗುವಂತೆ ಮಾಡುವದೇ ಇವರ ಮುಖ್ಯ ಕರ್ತವ್ಯ. ಈ ದಿಶೆಯಲ್ಲಿ ನಾನು ಈ ಮೊದಲು ಮಾಡಿದ ಪ್ರಥಮ ಪ್ರಯತ್ನಕ್ಕೆ ಸಿಕ್ಕ ಪ್ರೋತ್ಸಾಹನೆಯಿಂದ ಪುಲಕಿತನಾಗಿ, ಅದನ್ನೇ ತಿದ್ದಿ ಬೆಳೆಸಲು ಮಾಡಿದ ಪ್ರಯತ್ನದ ಫಲವೆಂದು ಈ ಕೃತಿಯನ್ನು ಅಭ್ಯಾಸಿಗಳ ಎದುರು ಇಡುತ್ತಿದ್ದೇನೆ. ನನ್ನ ಹಾರೈಕೆಗಳು ವಿದ್ಯಾರ್ಥಿಗಳಿಗೆ ಸತ್ಯಾಂಶಗಳಾಗಿ ಪರಿಣಮಿಸಿ, ಅವರಿಗೆ ಭಾರತದ ಇತಿಹಾಸದ ಯಥಾರ್ಥಜ್ಞಾನ ಮಾಡಿಕೊಟ್ಟರೆ ಈ ನನ್ನ ಅಲ್ಪ ಸೇವೆಯು ಕೃತಾರ್ಥವಾಯಿತೆಂಬ ಭಾವನೆ. ಜೊತೆಗೆ ನನ್ನ ಮಿತ್ರರೂ ತ್ರಿಯಂಬಕ ಮುದ್ರಣಾಲಯದ ಸಂಚಾಲಕರೂ ಆದ ಶ್ರೀ. ಎಸ್. ಕೆ. ಹಂಪಿಹೊಳಿ, ಬಿ. ಎ. ಇವರು ಸೂಕ್ತ ಸಲಹೆಗಳಿಂದ ನೆರವು ನೀಡಿದ್ದಕ್ಕೂ, ಈ ಹೊತ್ತಿಗೆಯನ್ನು ಅಂದವಾಗಿ ಸಕಾಲಕ್ಕೆ ಮುದ್ರಿಸಿ ಕೊಟ್ಟಿದ್ದಕ್ಕೂ ಅವರಿಗೆ ನನ್ನ ಕೃತಜ್ಞತೆಗಳು.

ಧಾರವಾಡ.

ಎಚ್. ಎಸ್. ದೂದಿಹಳ್ಳಿ

೩-೩-೧೯೫೧

# ಪ ರಿ ವಿ ಡಿ.

# ಇತಿಹಾಸ ಕೈಪಿಡಿ.



## ೧. ಇತಿಹಾಸ ಶಿಕ್ಷಣ.

ಇತಿಹಾಸವೆಂದರೆ ಮಾನವನ ಪ್ರಗತಿಯ ಕಥೆ ಎಂದು ಸಾಮಾನ್ಯವಾಗಿ ಹೇಳಬಹುದು. ಇದರಲ್ಲಿ ಹಿಂದಿನಿಂದ ಇಂದಿನವರೆಗೆ ಮಾನವನು, ತನ್ನ ಶೀಲ, ಸಂಸ್ಕೃತಿ, ಉದ್ಯೋಗಗಳಲ್ಲಿ ಹೊಂದುತ್ತ ಬಂದ ಪರಿವರ್ತನೆಯೂ, ಇದಕ್ಕಾಗಿ ಅವನು ಜರುಗಿಸಿದ ಸಂಗತಿಗಳ ಕ್ರಮವೂ ಅಡಕವಾಗಿರುತ್ತವೆ

ಹಿಂದಿನ ಕಾಲದಲ್ಲಿ ಅಂದರೆ ಪುರಾಣಕಾಲದಿಂದ ಇತ್ತೀಚೆಗೆ ಇತಿಹಾಸವು ಸಾಹಿತ್ಯದ ಅಂಗವಾಗಿತ್ತು. ಆದ್ದರಿಂದ ಪುರಾಣಕಾಲದ ಐತಿಹಾಸಿಕ ಸಂಗತಿಗಳು ಭಾಷಾವೈಚಿತ್ರಿಯಿಂದ ಹೇಳಲ್ಪಟ್ಟಿವೆ. ಕೆಲವೊಂದು ಕಾಲದವರೆಗೆ ಕೇವಲ ಮನೋರಂಜನೆಯೇ ಐತಿಹಾಸಿಕ ಸಂಗತಿಗಳ ಉಲ್ಲೇಖದ ಉದ್ದೇಶವಾದ್ದರಿಂದ, ಅಸಂಖ್ಯ ಕಾಲ್ಪನಿಕ ಸಂಗತಿಗಳು ಇದರಲ್ಲಿ ಅಡಕವಾದವು. ಮುಂದೆ ಕೆಲ ಕಾಲದ ವರೆಗೆ, ತರುಣರನ್ನು ಹುರಿದುಂಬಿಸುವದಕ್ಕಾಗಿ ಗತಕಾಲದ ಸಂಗತಿಗಳ ಉಪಯೋಗವಾಗುತ್ತಿದ್ದರಿಂದ, ಇತಿಹಾಸಕಾರರು, ಅರಸು-ಅರಸಿಯರ ಚರಿತ್ರ, ಯುದ್ಧವರ್ಣನೆಗಳಿಗೆ ಮಹತ್ವ ಕೊಟ್ಟು, ಜನಸಾಮಾನ್ಯರ ಜೀವನ ವೃತ್ತಾಂತವನ್ನು ಬದಿಗಿಟ್ಟಿರುವರು. ಹೆಚ್ಚೇನು ? ೧೯ ನೇ ಶತಮಾನಕ್ಕಿಂತ ಮೊದಲು ಬರೆದ ಇತಿಹಾಸವು ಕೇವಲ ವ್ಯಕ್ತಿಗತವಾಗಿದ್ದು, ಅಥವಾ ಸಂಗತಿಗತವಾಗಿದ್ದು, ಅದಕ್ಕೂ ಹಿಂದಿನ ಶತಮಾನಗಳಲ್ಲಿ ಇತಿಹಾಸವೂ, ಪುರಾಣಗಳೂ, ಒಂದೇ ಆಗಿದ್ದವೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

೧೯ ನೇ ಶತಮಾನದ ಮಧ್ಯದಿಂದ, ಪಶ್ಚಿಮದಲ್ಲಿ ಮತ್ತು ಪೂರ್ವದಲ್ಲಿ ಮಾನವ ಸಮಾಜದ ರೀತಿ ನೀತಿಗಳಲ್ಲಿ ಬಹಳ ಪ್ರಗತಿಯಾಗಿ ಇತಿಹಾಸದ ಬರಹವು ಒಂದು ಹೊಸ ರೂಪವನ್ನು ತಳೆದಿತು ಅಂದಿನಿಂದ ಇತಿಹಾಸ ಕರ್ತರೂ, ಸಂಶೋಧಕರೂ ಇದಕ್ಕೆ ಒಂದು ಶಾಸ್ತ್ರೀಯತೆಯನ್ನು ತಂದು ಕೊಟ್ಟರು. ಇತಿಹಾಸದ ಬರಹವೂ, ಅಭ್ಯಾಸವೂ ಬಹುಮುಖವಾಗಿ ಬೆಳೆ-ಯಹತ್ತಿದವು. ಇಂದು ಇತಿಹಾಸವು ಮೂಲಾಧಾರಗಳ ಮೇಲೆ ಮಂಡಿಸ-ಲ್ಪಡುತ್ತಿದ್ದು, ಮಾನವ ಪ್ರಗತಿಯನ್ನು ವಿಮರ್ಶಕ ದೃಷ್ಟಿಯಿಂದ ವಿವೇಚಿಸು-ತ್ತದೆ.

ಏನಿದ್ದರೂ, ಇತಿಹಾಸವು ನಮ್ಮ ಪೂರ್ವಜರ ಉಪಯುಕ್ತ ಅನುಭವ ಗಳ ಸಂಗ್ರಹ ಮತ್ತು ಅಭ್ಯಾಸ ಎಂಬುದು ನಿರ್ವಿವಾದವಾದದ್ದು.

ಮನುಷ್ಯ ಪ್ರಾಣಿಯು ಭೂಮಿಯ ಮೇಲೆ ಮೂಡಿದಂದಿನಿಂದ, ಅದೇಕೆ ! ಅದಕ್ಕೂ ಮೊದಲಿನಿಂದ ಇದರ ಪ್ರಾರಂಭ. ಸಾಮಾನ್ಯವಾಗಿ ಇತಿಹಾಸವು ಒಂದು ವ್ಯಕ್ತಿ, ರಾಷ್ಟ್ರ, ಸಂಗತಿ, ಜನಾಂಗಕ್ಕೆ ಸಂಬಂಧಿಸಿರದೆ, ಮಾನವ ಕೋಟಿಗೇ ಸಂಬಂಧಿಸಿದುದು. ರಾಜಕೀಯ, ಸಾಮಾಜಿಕ, ಆರ್ಥಿಕ ದೃಷ್ಟಿಗಳಿಂದ ಮಾನವಸಮಾಜದ ಬೆಳವಣಿಗೆಯನ್ನು ಇದು ಸೂಚಿ ಸುತ್ತದೆ. ನಿಜ ಸಂಗತಿಗಳನ್ನು ಸಂಗ್ರಹಿಸಿ, ವಿಮರ್ಶಾತ್ಮಕ ದೃಷ್ಟಿಯಿಂದ ಪಕ್ಷಪಾತವಿಲ್ಲದೆ, ಈ ಸಂಗತಿಗಳಿಗೆ ಸಮನಾದ, ಸಮಾಧಾನಕರವಾದ ಅರ್ಥ ಕೊಡುವದೇ ಇದರ ಹೆಗ್ಗುರಿಯು. ಒಟ್ಟಿಗೆ, ಇತಿಹಾಸವು ಮಾನವನ ವಿಕಾ ಸಕ್ಕಾಗಿ ಅಭ್ಯಸಿಸಬೇಕಾದ ವಿಷಯವು

ಇತಿಹಾಸದ ಗುಣಾವಗುಣಗಳ ಬಗ್ಗೆ ಭಿನ್ನಾಭಿಪ್ರಾಯವಿದೆ. ಎಲ್ಲ ವಿಷಯಗಳಲ್ಲಿ ಇತಿಹಾಸವೇ ಮೇಲು ಎಂದು ಕೆಲವರು ಹೇಳಿದರೆ, ಇತಿ ಹಾಸವು ಕೇವಲ ಮನೋರಂಜನೆಗಾಗಿದ್ದು, ಇದನ್ನು ಬಾಲಕರ ಮನಸ್ಸಿನಲ್ಲಿ ಇಂಗಿಸುವದೇ ಕಷ್ಟವೆಂದು ಹೇಳುವವರಿದ್ದಾರೆ. ಪಶ್ಚಿಮದ ಒಂದು ಶಿಕ್ಷಣ ಪದ್ಧತಿಯು ಇತಿಹಾಸವನ್ನೆ ಮೂಲವಿಷಯವನ್ನಾಗಿ ಇಟ್ಟುಕೊಂಡಿದೆ. ಏಕೆಂದರೆ ಇದು ಮಾನವನ ಚಟುವಟಿಕೆಗಳ ವರದಿಯಾಗಿದ್ದು ಇಂದಿನವರ ಮನಸ್ಸಿನ ಮೇಲೆ ಬಲವಾದ ಪರಿಣಾಮವನ್ನುಂಟುಮಾಡುವದೆಂದು. ಇಂದಿನ

ಮೂಲ ಅಥವಾ ಬೇಸಿಕ್ ಶಿಕ್ಷಣದಲ್ಲಿ ಇತಿಹಾಸಕ್ಕೆ ತಕ್ಕ ಸ್ಥಾನವು ಕೊಡಲ್ಪಟ್ಟಿದೆ. ಸಮಾಜದ ಏಳ್ಗೆಯನ್ನೇ ಗುರಿಯಾಗಿಟ್ಟುಕೊಂಡು, ವ್ಯಕ್ತಿಗಳ ಸಂಗತಿಗಳ ಹಿರಿಮೆಯನ್ನು ತಿಳುಹುವದು ಇಂದು ಇತಿಹಾಸವೆನಿಸಿದೆ.

**ಇತಿಹಾಸ ಶಿಕ್ಷಣದ ಉದ್ದೇಶಗಳು:—**

(೧) ಬಾಲಕರ ವಿಚಾರ ಮತ್ತು ಸ್ಮರಣ ಶಕ್ತಿಗಳು ಬೆಳೆಯಲೆಂದು.

(೨) ಹಿಂದಿನ ಕಾಲದ ತಿಳಿವಳಿಕೆಯಿಂದ ಇಂದಿನ ಬಾಲಕರ ನೀತಿಯು ಸುಧಾರಿಸಲೆಂದು.

(೩) ನಮ್ಮ ಪೂರ್ವಜರು ಮಾಡಿದ ಸಾಹಸ ಕಾರ್ಯಗಳಿಂದ ಇಂದಿನವರಲ್ಲಿ ಹುರುಪು, ಹುಮ್ಮಸ, ದೇಶಾಭಿಮಾನಗಳು ಬೆಳೆಯಲೆಂದು.

(೪) ಇಂದಿನ ವರೆಗೆ ನಾಡಿನ ಪೂರ್ವ ಚರಿತೆ ತಿಳಿಯಲೆಂದು.

(೫) ರಾಜಕಾರಣದ ಅಂದಿನ ಮತ್ತು ಇಂದಿನ ಧೋರಣೆಯು ತಿಳಿಯಲೆಂದು.

ಇಂದಿನ ಬಾಲಕರು ನಾಳಿನ ನಾಗರಿಕರೆಂಬುದು ನಿಜವಷ್ಟೆ! ಅದ್ದರಿಂದ ಇತಿಹಾಸದ ಅಭ್ಯಾಸದ ಪರಿಣಾಮವಾಗಿ ಜಾಣರೂ, ಮುತ್ಸದ್ದಿಗಳೂ, ಕಲಿಗಳೂ ಆದ ಜನರು ಜನಿಸುವರು. ಅಲ್ಲದೆ, ಪ್ರತಿಯೊಬ್ಬ ನಾಗರಿಕನಿಗೆ ತನ್ನ ಹಕ್ಕು ಬಾಧ್ಯತೆಗಳ ಮತ್ತು ಕರ್ತವ್ಯಗಳ ಅರಿವಿರುವದು ಅತ್ಯಾವಶ್ಯವು. ಮತ್ತು ಹಿಂದಿನ ಕಾಲದ ಜ್ಞಾನದಿಂದ ಇಂದಿನ ಕಾಲದ ಸಾಮಾಜಿಕ, ರಾಜಕೀಯ ಸಮಸ್ಯೆಗಳನ್ನು ಅಲ್ಪ ಪ್ರಯಾಸದಿಂದ ಬಿಡಿಸಲು ಅನುಕೂಲವಾಗುವದು. ಹಿಂದಿನ ಕಾಲದ ಆದರ್ಶ ವ್ಯಕ್ತಿಗಳ, ಮಹಾಪುರುಷರ ಚರಿತ್ರದ ಅಭ್ಯಾಸದಿಂದ ಬಾಲಕರ ಭಾವನೆಗಳು ಉದ್ರೇಕಗೊಂಡು, ಅವರೂ ಸಮಾಜದ ಆಶೆ ಆಕಾಂಕ್ಷೆಗಳಲ್ಲಿ ಭಾಗವಹಿಸಹತ್ತುವರು. ಮೇಲಾಗಿ ಇತಿಹಾಸದ ಅಭ್ಯಾಸವು ಬಾಲಕರಲ್ಲಿ ಉದಾರ ಭಾವನೆ, ಸಹಾನುಭೂತಿ, ಮತ್ತು ಸ್ವದೇಶಾಭಿಮಾನಗಳನ್ನು ಹುಟ್ಟಿಸುತ್ತದೆ. ಕೊನೆಯದಾಗಿ ಇತಿಹಾಸದ ಅಭ್ಯಾಸವು ಬಾಲಕರಲ್ಲಿ ಕಾರ್ಯ-ಕಾರಣ ಭಾವನೆಯನ್ನು ಹುಟ್ಟಿಸುತ್ತದೆ. ಐತಿಹಾಸಿಕ

ಎಂಬುದನ್ನು ವಿವರಿಸಬೇಕು

೭ ನೇ ವರ್ಗದಲ್ಲಿ ಆಧುನಿಕ ಯುಗದ ಮಹತ್ವದ ಸಂಗತಿಗಳನ್ನು ಕಾಲಾನುಕ್ರಮದಿಂದ ಕಲಿಸಬೇಕು. ಈ ವರ್ಗದಲ್ಲಿ ಹುಡುಗರು ಸ್ವಂತ ವಿಚಾರ ವಿಮರ್ಶೆಯಿಂದ ಐತಿಹಾಸಿಕ ಸಂಗತಿಗಳನ್ನು ಪರಿಶೀಲಿಸುವಂತೆ ನೋಡಿಕೊಳ್ಳಬೇಕು.

**ಇತಿಹಾಸ ಶಿಕ್ಷಕ:—**

ಇತಿಹಾಸ ಶಿಕ್ಷಕನಿಗೆ ತನ್ನ ವಿಷಯದ ಜ್ಞಾನವು ಚನ್ನಾಗಿ ಆಗಿರಬೇಕು. ಅಂದರೆ ಇತಿಹಾಸ ಶಿಕ್ಷಕನು ಒಂದು "ಜ್ಞಾನಕೋಶ"ವೇ ಆಗಿರಬೇಕು ಎಂಬ ಅರ್ಥವಲ್ಲ. ಆದರೆ ಒಂದು "ಯುಗ"ವನ್ನು ಚನ್ನಾಗಿ ಅಭ್ಯಾಸ ಮಾಡಿರಬೇಕಲ್ಲದೆ, ಐತಿಹಾಸಿಕ ಕಾಗದ ಪತ್ರ, ಸಂಗತಿಗಳನ್ನು ಚನ್ನಾಗಿ ಹೊಂದಿಸಿಕೊಳ್ಳುವ ಬುದ್ಧಿವಂತಿಕೆಯು ಇವನಲ್ಲಿರಬೇಕು. ಜಗತ್ತಿನ ಇತಿಹಾಸವೆ ಜ್ಞಾನವೂ ಕೆಲಮಟ್ಟಿಗಿರಬೇಕು. ಅಲ್ಲದೆ, ಇತಿಹಾಸ ಶಿಕ್ಷಕನು ಪ್ರಾಣಿಶಾಸ್ತ್ರ, ಗತಕಾಲದ ಗುರುತುಗಳಲ್ಲಿ ಪ್ರವೀಣನಿರಬೇಕು. ವಿಷಯದ ಜೊತೆಗೆ ವಿಧಾನವು ಇತಿಹಾಸ ಶಿಕ್ಷಕನಿಗೆ ಅರಿಕೆಯಿರಬೇಕು. ಇತಿಹಾಸದ ವಿಷಯ ಮತ್ತು ವಿಧಾನಗಳಲ್ಲಿ ವಿಷಯವೇ ಪ್ರಧಾನವಾದುದು. ಏಕಂದರೆ ವಿಷಯವು ಸಾಕಷ್ಟಿದ್ದು, ಶಿಕ್ಷಕನಿಂದ ಕ್ರಮಬದ್ಧವಾಗಿ ಮಾಡಲ್ಪಟ್ಟರೆ, ಹುಡುಗರಲ್ಲಿ ಆನಂದವೂ, ಆದರವೂ ಸಹಜವಾಗಿ ತಲೆದೋರುವವು.

ಆದರೆ ಇತಿಹಾಸದ ವಿಷಯವನ್ನರಿತುಕೊಳ್ಳುವಾಗ, ಧಾರ್ಮಿಕ ಅಥವಾ ರಾಷ್ಟ್ರೀಯ ಅಂಧತನಕ್ಕೆ ಅಂಟಿಕೊಳ್ಳಬಾರದು. ಇತಿಹಾಸದ ಸಂಗತಿಗಳನ್ನು ಸಾಧಕ ಬಾಧಕ ಪ್ರಮಾಣಗಳಿಂದ ತೂಗಿ ನೋಡಬೇಕು. ಮತ್ತು ಕಾರ್ಯ ಕಾರಣ ತತ್ವಗಳಿಗೆ ವರೆ ಹಚ್ಚಿ ನೋಡಬೇಕು.

ಇತಿಹಾಸ ಶಿಕ್ಷಕನು ಹಿಂದಿನ ಸಂಗತಿಗಳನ್ನೆಲ್ಲ ಪರಿಷ್ಕಾರವಾಗಿ ತಿಳಿದು ನೋಡಬೇಕು. ಮುಂದೆ ಬರುವ ಸಂಗತಿಗಳನ್ನು ಚನ್ನಾಗಿ ಊಹಿಸಬೇಕು. ಮುಖ್ಯವಾಗಿ ಐತಿಹಾಸಿಕ ಪುರುಷರನ್ನು ವಿವೇಚಿಸುವಾಗ ಇತಿಹಾಸ ಶಿಕ್ಷಕನು ಬಹಳ ಎಚ್ಚರದಿಂದಿರಬೇಕು. ಏಕೆಂದರೆ ಇದು ಜಾತೀಯತೆಗೆ ಎಡೆಗೊಡಬಹುದು.

ಇತಿಹಾಸ ಶಿಕ್ಷಕನಿಗೆ ವಿಧಾನವು ಒಂದು ಒಡೆಯಲಾರದ ಒಗಟವಾಗ ಲಾರದು. ಏಕೆಂದರೆ ಒಂದಿಲ್ಲೊಂದು ವಿಧಾನವನ್ನು ಕೈಕೊಳ್ಳದೆ, ಇತಿಹಾಸದ ಪಾರವೇ ಸಾಗಲಾರದು ಹೇಳಿಕೆ, ಚಿತ್ರ, ನಕಾಶ, ಚರ್ಚೆ ಮುಂತಾದವು ಗಳೆಲ್ಲ ಇತಿಹಾಸ ಶಿಕ್ಷಕನಿಗೆ ವಿಧಾನಗಳಾಗಿಯೇ ಪರಿಣಮಿಸುವವು ವಿಧಾ ನಕ್ಕೆ ಬಲವಾಗಿ ಅಂಟಿಕೊಳ್ಳುವ ಕೆಲವು ಟ್ರೇಂಡ ಶಿಕ್ಷಕರನ್ನು ನಾವು ಕಾಣು ವೆವು ವಿಧಾನವನ್ನು ನಾವು ತಿಳಿಯಲಾರೆವು, ಎಂದೆನ್ನುವ ಅನ್ಟ್ರೇಂಡ ಶಿಕ್ಷಕರೂ ಇರುವದುಂಟು ಆದರೆ ಇತಿಹಾಸವನ್ನು ಕಲಿಸುವಾಗ ಇವರೆಲ್ಲರೂ ಒಂದಿಲ್ಲೊಂದು ತರದ ವಿಧಾನವನ್ನು ಉಪಯೋಗಿಸುವರು ಆದರೆ ಯಾವ ವಿಧಾನವು ಹೆಚ್ಚು ಉಪಯುಕ್ತವೆಂಬುದನ್ನು ಅರಿತು ಕೊಳ್ಳುವದೇ ಇತಿಹಾಸ ಶಿಕ್ಷಕನ ಆದ್ಯ ಕರ್ತವ್ಯವು.

ಇತಿಹಾಸ ಶಿಕ್ಷಣದಲ್ಲಿ "ನಟನೆ"ಯು ಸ್ಥಾನ:—

ಹಿಂದಿನ ವ್ಯಕ್ತಿ, ಸಂಗತಿಗಳು ಕಾಲಗತಿಯಲ್ಲಿ ಕಣ್ಮರೆಯಾದ್ದರಿಂದ ಇಂದಿನ ಪರಿಸ್ಥಿತಿಯಲ್ಲಿ ಅವುಗಳ ಕಲ್ಪನೆ ಮಾಡಿಕೊಳ್ಳುವದು ಬಹು ಕಠಿಣ ವಾದ ಮಾತು. ಹೀಗಾಗಿ ಬಾಲಕರಿಗೆ ಐತಿಹಾಸಿಕ ವ್ಯಕ್ತಿಗಳ ವಿಷಯಕ್ಕೆ ಅನುಕಂಪನೆ ಹುಟ್ಟುವದಿಲ್ಲ ಇದರ ಪರಿಣಾಮವಾಗಿ ಇತಿಹಾಸದ ಪಾಠ ಗಳೂ, ಅಭ್ಯಾಸವೂ ಬಹಳ ನಿರಸವಾಗಿ ಸಾಗುವವು.

'ನಟನೆ' ಯು ಈ ನಿರಸವನ್ನು ಹೊಡೆದೋಡಿಸಿ ಇತಿಹಾಸದ ಅಭ್ಯಾಸ ದಲ್ಲಿ ಮತ್ತು ಸಂಗತಿಗಳಲ್ಲಿ ಜೀವಕಳೆಯನ್ನು ತುಂಬುತ್ತದೆ. ಹುಡುಗರು ಬುದ್ಧ, ಅಶೋಕ, ಶಿವಾಜಿ ಮುಂತಾದವರ ಪಾತ್ರಗಳನ್ನು ಅಭಿನಯಿಸುವಾಗ ಅವರೊಡನೆ ಏಕರೂಪರಾಗಿ, ಅವರ ಆಗುಹೋಗುಗಳನ್ನು ತಿಳಿಯಲೆತ್ನಿಸು ವರು. ಇದರಿಂದ ಪೂರ್ವದ ವ್ಯಕ್ತಿಗಳು ನಮ್ಮಂತಹರೇ ಎಂಬ ಕಲ್ಪನೆಯುಂ ಟಾಗಿ ಇತಿಹಾಸದ ಅಭ್ಯಾಸವು ಸರಸವಾಗುವದು.

ನಟನೆಯನ್ನು ಮಾಡುವದರಲ್ಲಿ ನೋಡುವದರಲ್ಲಿ ಒಂದಕ್ಕಿಂತ ಹೆಚ್ಚು ಇಂದ್ರಿಯಗಳು ಕೆಲಸಮಾಡುವದರಿಂದ ವಿಷಯವು ಚನ್ನಾಗಿ ಅವಗತವಾಗು ವದು. ತನ್ಮೂಲಕ ಬುದ್ಧಿಯೂ ಭಾವನೆಯೂ ಎಚ್ಚರಾಗುವವು. ಹಿಂದಿನ

ಸಂಗತಿಗಳ ವಿಷಯವಾಗಿದ್ದ ನಮ್ಮ ಭಾವನೆ, ಅನುಕಂಪನೆ, ವಿಶಾಲಹೃದಯ, ಆಳವಾದ ಮತ್ತು ಸೂಕ್ಷ್ಮ ತಿಳಿವಳಿಕೆಗಳೂ, ಅವುಗಳನ್ನು ಹೆಚ್ಚು ಮನದಟ್ಟು ಮಾಡಿಕೊಡುವವು.

ನಟನೆಯು ಒಂದು ಕಲಾಕೃತಿಯು ಆದರೆ ಇತಿಹಾಸವು ಒಂದು ಶಾಸ್ತ್ರ, ಆದ್ದರಿಂದ ಇವು ಒಂದನ್ನೊಂದು ಅಲ್ಲಗಳೆಯದಂತೆಯೂ, ಆಕ್ರಮಿಸದಂತೆಯೂ ನೋಡಿಕೊಳ್ಳಬೇಕು ಇತಿಹಾಸಶಿಕ್ಷಕನೂ, ವಿದ್ಯಾರ್ಥಿಗಳೂ ಐತಿಹಾಸಿಕ ಕಾದಂಬರಿ, ನಾಟಕ, ಸಂಭಾಷಣೆ, ಸ್ವಗತ ಭಾಷಣ, ಸಿನೇಮಾ ಮುಂತಾದವುಗಳ ಬಗ್ಗೆ ಬಹಳ ಜಾಗರೂಕರಾಗಿರಬೇಕು

ಹಿಂದುಸ್ತಾನದ ಇತಿಹಾಸದಲ್ಲಿ ನಟನೆಗೆ ಯೋಗ್ಯ ವಿಷಯಗಳು ಕೆಳಗಿನಂತಿವೆ:—

(೧) ಬುದ್ಧನ ಜೀವನದ ಸಂಗತಿಗಳು.
(೨) 'ಜಾತಕ' ಕತೆಗಳು
(೩) ಆರ್ಯ-ದ್ರಾವಿಡ ಸಂಪರ್ಕ ಸಂದರ್ಭಗಳು.
(೪) ಯಜ್ಞಗಳು· ಆರ್ಯ ದೇವತೆಗಳ ಸ್ತುತಿ
(೫) ಸಿಕಂದರ ಪೋರಸ್ ಇವರ ಭೆಟ್ಟಿ.
(೬) ಸೆಲ್ಯುಕಸನೂ ಚಂದ್ರುಗುಪ್ತ ಮೌರ್ಯನೂ
(೭) ಚಂದ್ರಗುಪ್ತ ಮತ್ತು ಕೌಟಿಲ್ಯರ ಸಂಭಾಷಣೆ
(೮) ಬಾಣ ಮತ್ತು ಹರ್ಷರ ಸಂಭಾಷಣೆ.
(೯) ಪ್ರಥ್ವಿರಾಜ ಮತ್ತು ಸಂಯುಕ್ತೆಯ ಮದುವೆ
(೧೦) ಫರ್ದುಶಿ ಕವಿ ಮತ್ತು ಗಝುನಿ ಮಹಮ್ಮದ
(೧೧) ಮಾನಸಿಂಗ ಮತ್ತು ರಾಣಾ ಪ್ರತಾಪ.
(೧೨) ಬಾಬರನ 'ಸುರಾ' ತ್ಯಾಗ
(೧೩) ಅಕಬರನ ನವರತ್ನಗಳು.
(೧೪) ಆಗ್ರಾದಿಂದ ಶಿವಾಜಿ ಪಾರಾಗಿ ಹೋದದ್ದು.
(೧೫) ಹಿಂದೂ ಮತ್ತು ಯುರೋಪದ ರಾಯಭಾರಿಗಳೆದುರು ಶಿವಾಜಿಯ ಪಟ್ಟ.

(೧೬) ಪಾಣಿಪತ್ತದ ಯುದ್ಧಕ್ಕೆ ಹೊರಡುವ ಮೊದಲು ದರ್ಬಾರದಲ್ಲಿ 'ಭಾವು'ನ ಭಾಷಣ

(೧೭) ನಾರಾಯಣರಾಯನ ಕೊಲೆ.

(೧೮) 'ಪ್ಲಾಸಿ' ಯುದ್ಧದಲ್ಲಿ ಕ್ಲೈವ್ಹ.

(೧೯) ಪಾಶ್ಚಿಮಾತ್ಯರಿಗೂ ಪೌರ್ವಾತ್ಯರಿಗೂ ನಡೆದ ವಾದ.

(೨೦) ಮೆಕಾಲೇನ ವರದಿ.

(೨೧) ರಾಜಾ ರಾಮಮೋಹನ ರಾಯನ ಜೀವನ ಚರಿತ್ರೆಯಲ್ಲಿಯ ಸಂಗತಿಗಳು.

ಬಾಲಕರು ಸ್ವಾಭಾವಿಕವಾಗಿ ಅನುಕರಣಪ್ರಿಯರು ಈ ಸಹಜ ಪ್ರವೃತ್ತಿಯ ಸಹಾಯದಿಂದ ಐತಿಹಾಸಿಕ ಸಂಗತಿಗಳ, ಪ್ರಸಂಗಗಳ ಅಭಿನಯ ಮಾಡಲು ಹಚ್ಚಬೇಕು

**ಕರಿ ಹಲಗೆಯ ಟಿಪ್ಪಣಿಯು:—**

ಕರಿ ಹಲಗೆಯ ಮೇಲೆ ಒಂದು ಕಡೆಗೆ ಆಕೃತಿ, ನಕಾಶೆ ಮುಂತಾದುದನ್ನು ತೆಗೆದು, ಮತ್ತೊಂದು ಕಡೆಗೆ ಮುಖ್ಯ ಸಂಗತಿಗಳನ್ನು ಕ್ರಮವಾಗಿ ಸ್ಪಷ್ಟವಾಗಿ, ಚಿಕ್ಕವಾಕ್ಯಗಳಲ್ಲಿ ಬರೆಯಬೇಕು. ಸಂಗತಿಗಳು ಹೆಚ್ಚಾಗಿದ್ದಲ್ಲಿ ಅಂಕೆಗಳನ್ನು ಉಪಯೋಗಿಸುವದು ಒಳಿತು. ಬಾಲಕರ ಸಹಾಯದಿಂದ ಕರಿ ಹಲಗೆಯ ಟಿಪ್ಪಣಿಯನ್ನು ಸಾಗಿಸುವದು ಒಳ್ಳೇದು. ಹುಡುಗರ ಕೃತಿಯಿಂದ ಟಿಪ್ಪಣಿಗಳನ್ನು ಬರೆಸುವದು ವಿಹಿತವು. ಏಕೆಂದರೆ

(೧) ಒಮ್ಮೊಮ್ಮೆ ಇತಿಹಾಸ ಪ್ರಮಿಕ ಪುಸ್ತಕವು ಹುಡುಗರಿಗೆ ಸುಲಭವಾಗಿ ತಿಳಿಯುವದಿಲ್ಲ.

(೨) ಪರೀಕ್ಷೆಯಲ್ಲಿ ಯೋಗ್ಯ ಉತ್ತರಗಳನ್ನು ಕೊಡಲು ಟಿಪ್ಪಣಿಗಳು ಬಹಳ ಉಪಯೋಗ ಬೀಳುವವು.

ಆದರೆ ಇದರ ದೋಷಗಳೂ ಒಡೆದು ಕಾಣುವಂತಹವಿರುವವು. ಅವೆಂದರೆ:—

(೧) ಹುಡುಗರು ಟಿಪ್ಪಣಿಗಳನ್ನು ಬಾಯಿಪಾಠ ಮಾಡಿ, ತಮ್ಮ

ವ್ಯಾಸಂಗವನ್ನು ನಿಲ್ಲಿಸಿಬಿಡುವರು.

(೨) ಟಿಪ್ಪಣಿಗಳು ಕಲಿಯುವ ಸಾಧನೆಗಳೆನಿಸವೆ ಪರೀಕ್ಷೆಯಲ್ಲಿ ಪಾಸಾಗುವ ಸಾಧನೆಗಳೆನಿಸುವವು.

ಟ್ರೇನಿಂಗ ಕಾಲೇಜಗಳಲ್ಲಿ ಟಿಪ್ಪಣಿ ಕೊಡುವ ವಿಧಾನ ಮತ್ತು ತತ್ವಗಳನ್ನು ವಿವೇಚಿಸಿ ಒಂದು ನಿರ್ಣಯಕ್ಕೆ ಬರುವದು ಉತ್ತಮವು ಹುಡುಗರು ತಮ್ಮ ಟಿಪ್ಪಣಿಗಳನ್ನು ತಾವೇ ಬರೆದುಕೊಂಡು ಅಥವಾ ಮನೆಯಲ್ಲಿ ಇತಿಹಾಸ ವಿಷಯಗಳನ್ನು ನಿಬಂಧರೂಪದಲ್ಲಿ ಬರೆದಿಟ್ಟರೆ ವಿವರವಾದ ಟಿಪ್ಪಣಿಗಳ ಅವಶ್ಯಕತೆಯು ಬಹಳ ಕಂಡುಬರುವದಿಲ್ಲ.

**ಮೂಲಾಧಾರ ಪದ್ಧತಿ:—**

ಇತಿಹಾಸದ ಅಭ್ಯಾಸಕ್ಕೆ ಐತಿಹಾಸಿಕ ಸಂಗತಿಗಳೇ ಮುಖ್ಯ ಆಧಾರವು. ಆದರೆ ಇಂದಿನ ಇತಿಹಾಸ ಶಿಕ್ಷಕನು ಹಿಂದಿನ ಸಂಗತಿಗಳನ್ನು ಹೇಗೆ ಅರಿತುಕೊಳ್ಳಬೇಕು ? ಇದಕ್ಕಾಗಿ ಅವನು ಕೆಲವು ಆಧಾರಗಳ ಮೇಲೆ ಅವಲಂಬಿಸಬೇಕಾಗುತ್ತದೆ. ಶಿಕಂದರನ ದಾಳಿಯ ವರೆಗೆ ಬರೆದಿಟ್ಟ ಇತಿಹಾಸವು ಲಬ್ಧವಿದೆ. ಅದಕ್ಕೂ ಹಿಂದಿನ ಇತಿಹಾಸವು ದಂತಕಥೆ, ಪುರಾಣಗಳಲ್ಲಿ ಅಡಕವಾಗಿದೆ. ಅದಕ್ಕೂ ಹಿಂದೆ, ಮಾನವನ ಉಪಕರಣ, ಕಟ್ಟಡ, ಪಾತ್ರೆಗಳ ಅವಶೇಷಗಳು ನಮಗೆ ಇತಿಹಾಸವನ್ನು ಕಲಿಸುವವು. ಉದಾಹರಣಾರ್ಥ ಶಿಕಂದರನ ದಾಳಿಯ ವರೆಗಿನ ಮುಖ್ಯ ಮೂಲಾಧಾರಗಳನ್ನು ಕೆಳಗಿನಂತೆ ಆರಿಸಿಕೊಳ್ಳಬಹುದು.—

(೧) ಕಾಲಕ್ರಮಾನುಸಾರ ಬರೆದಿಟ್ಟ ಸಂಗತಿಗಳು, ಬಖರಗಳು, ಆತ್ಮಚರಿತೆ, ಚರಿತೆ, ದಿನಚರಿಗಳು, ಪತ್ರಗಳು, ಸರಕಾರೀ ಆಜ್ಞೆಗಳು, ಕಾಯದೆ ನಿರ್ಣಯ, ಕಾಯದೆಗಳು, ವ್ಯವಹಾರ ಪತ್ರಗಳು, ಸನದುಗಳು, ಕಡತಗಳು.

(೨) ಶಿಲಾಲೇಖಗಳು, ತಾಮ್ರಪಟಗಳು.

(೩) ಚಿತ್ರ, ಶಿಲಾಮೂರ್ತಿ, ಕಟ್ಟಡ, ಲೈನಮಾರ್ಗ, ಪೂಲು, ನೆನಪಿಗಾಗಿ ಕಟ್ಟಿದ ಕುರುಹು, ನಾಣ್ಯ, ಆಯುಧಗಳು, ವಸ್ತ್ರಗಳು, ಮುಂತಾದವು

ಗಳು ಶಿಕಂದರನ ದಾಳಿಯ ಕಲ್ಪನೆಯನ್ನು ಚೆನ್ನಾಗಿ ಮಾಡಿಕೊಡುವವು.

ಮೂಲಾಧಾರಗಳು ಕೆಳಗಿನ ಪರಿಣಾಮಗಳನ್ನು ಉಂಟುಮಾಡುವವು:—

(೧) ಐತಿಹಾಸಿಕ ವಾತಾವರಣವನ್ನು ಹುಟ್ಟಿಸುವವು.

(೨) ಬಾಯಿಂದ ಹೇಳುವ ಸಂಗತಿಗಳನ್ನು ಇವು ಉದಾಹರಿಸುವವು.

(೩) ಇವು ಬೇರೆ ಬೇರೆ ದೃಷ್ಟಿಕೋನಗಳನ್ನೂ, ಅಭಿಪ್ರಾಯವನ್ನೂ ವ್ಯಕ್ತಗೊಳಿಸುವವು ಐತಿಹಾಸಿಕ ಪ್ರವಾಸವೂ, ವಸ್ತು ಸಂಗ್ರಹಾಲಯಗಳ ಸಂದರ್ಶನವೂ, ಹುಡುಗರಲ್ಲಿ ಐತಿಹಾಸಿಕ ಲವಲವಿಕೆಯನ್ನು ಹುಟ್ಟಿಸುತ್ತವೆ.

**ಕಾಲದ ಜ್ಞಾನ ಮತ್ತು ಮಾಪನ.—**

ಚಿಕ್ಕ ಮಕ್ಕಳಿಗೆ ಕಾಲದ ಜ್ಞಾನವನ್ನು ಮಾಡಿ ಕೊಡುವದು ಬಹು ಕಠಿಣ ಮತ್ತು ಮಹತ್ವವಾದ ಕೆಲಸವು. ಇದು ಬರ ತಾರೀಖು ಮತ್ತು ಇಸ್ವಿಗಳನ್ನು ಹೇಳುವದರಿಂದ ಆಗದು. ಯಾಕಂದರೆ ಐತಿಹಾಸಿಕ ಸಂಗತಿಗಳು ವೇಳೆಯ ಅಥವಾ ಕಾಲದ ದೃಷ್ಟಿಯಿಂದ ಎರಡು ತೆರನಾಗಿವೆ. ಅವೆಂದರೆ — (೧) ಸಂಗತಿಗಳು ನಡೆದಿರುವ ಅವಧಿ. (೨) ಕಾಲಗತಿಯಲ್ಲಿ ಸಂಗತಿಗಳ ಸ್ಥಾನ. ಇವೆರಡೂ ಸಂಗತಿಗಳನ್ನು ಚನ್ನಾಗಿ ತಿಳಿಸಿ ಕೊಡುವದು ಶಿಕ್ಷಕನ ಕರ್ತವ್ಯವಾಗಿದೆ.

ಕಾಲಗತಿಯು ಅಥವಾ ಕಾಲಪರಿಮಾಣವು ಇಂದಿನ ದಿನಗಳಿಗೆ ಸಂಬಂಧ ಹಚ್ಚಿ ನೋಡಿದರೆ ಮಾತ್ರ ಚನ್ನಾಗಿ ತಿಳಿಯುತ್ತದೆ. ಶಿವಾಜಿ, ಅಕಬರ, ಹರ್ಷ, ಅಶೋಕ ಮುಂತಾದವರು ಬಾಳಿದ ಕಾಲವನ್ನು ಇಂದಿನಿಂದ ಇಷ್ಟು ಪೂರ್ವದಲ್ಲಿ ಎಂದು ತಿಳಿಸಿದರೆ ಚನ್ನಾಗಿ ಅವಗತವಾಗುವದು. ಒಂಟಿಗವಾದ ಇಸ್ವಿಗಳನ್ನು ಬಾಯಿಪಾಠ ಮಾಡುವದರಿಂದ ಈ ಕೆಲಸವು ಪೂರ್ಣವಾಗಲಾರದು.

ವೇಳೆಯನ್ನು ಅಥವಾ ಕಾಲವನ್ನು ಅನಾದಿಕಾಲದಿಂದ ಇಂದಿನ ವರೆಗೆ ಹರಿದಿರುವ ಮತ್ತು ಮುಂದಾದರೂ ನಿರಾತಂಕವಾಗಿ ಹರಿಯುವ ಒಂದು ಪ್ರವಾಹವೆಂದು ಕಲ್ಪಿಸಿಕೊಳ್ಳಬಹುದು. ಒಂದು ಹಾದಿಯುದ್ದಕ್ಕೂ ಇದ್ದ ಮೈಲುಗಲ್ಲುಗಳನ್ನು, ಕಾಲಪ್ರವಾಹದ ಎಡಬಲಕ್ಕಿದ್ದ ಇಸ್ವಿಗಳನ್ನು ಹೋಲಿಸ

ಬಹುದು. ಮೈಲುಗಲ್ಲುಗಳು ಹಾದಿಹೋಕನಿಗೆ ದಾರಿಯ ಉದ್ದಳತೆಯನ್ನು ತಿಳಿಸುವಂತೆ ಇವುಗಳ ಉಪಯೋಗವನ್ನು ಮಾಡಿಕೊಳ್ಳಬೇಕು

ಕಾಲ ಪ್ರವಾಹವನ್ನು ಬಾಲಕರಿಗೆ ಒಂದು ಉದ್ದವಾದ ಗೆರೆಯಿಂದ ಪ್ರತ್ಯಕ್ಷ ಮಾಡಿಸಬಹುದು. ಇಂಥ ಗೆರಗೆ ಕಾಲಮಾನರೇಷೆಯೆಂದು ಕರೆವರು ಕರಿಹಲಗೆಯ ಮೇಲೆ ೨—೩ ಫೂಟಿನದೊಂದು ಗೆರೆಯನ್ನೆಳೆದು ಅದರ ಎಡ ಬದಿಗೆ ಯೋಗ್ಯ ಅಳತೆಯ ಮೇಲೆ ಸಂಗತಿಗಳನ್ನು ಬರೆದರೆ, ಅವು ಜರುಗಿದ ವೇಳೆಯ ಯಥಾರ್ಥ ಕಲ್ಪನೆ ಬರುವದು. ಕಾಲಮಾನ ರೇಷೆಗಳು ಚರಿತ್ರೆ, ಆಳಿಕೆಯ ಮುಖ್ಯ ಸಂಗತಿಗಳು, ಪೂರ್ವಕಾಲದಿಂದ ಬಂದ ಇತಿಹಾಸ ಪರಂಪರೆಯನ್ನು ತಿಳಿಸಲು ಬಹಳ ಅನುಕೂಲವಾಗುತ್ತವೆ.

ಕಾಲಗತಿಯಲ್ಲಿ ರಾಜ್ಯಗಳ, ಸಾಮ್ರಾಜ್ಯಗಳ ಏರಿಳಿತಗಳನ್ನೂ, ರಾಜ ವಂಶಗಳು ಪಡೆದ ಮೇಲು ಕೀಳುಗಳನ್ನೂ ತಿಳಿಸಲು ಗ್ರಾಫ ಅಥವಾ ರೇಖಾ ಚಿತ್ರಗಳು ಬಹಳ ಉಪಯೋಗ ಬೀಳುತ್ತವೆ. ಗ್ರಾಫಗಳಿಂದ ಒಂದು ವಂಶ ದ ಅಥವಾ ಸಂಗತಿಯ ಉನ್ನತ ಅಥವಾ ಉಚ್ಚ ಕಾಲವು ಇಂತಹದೇ ಎಂದು ಥಾರಾಳವಾಗಿ ಹೇಳಬಹುದು

**ಸಮಕೇಂದ್ರ ಪದ್ಧತಿ:—**

ಇತಿಹಾಸವನ್ನು ಕಲಿಸುವ ರೀತಿಗಳಲ್ಲಿ ಸಮಕೇಂದ್ರ ಪದ್ಧತಿಯು ಬಹು ಜನರಿಗೆ ಮಾನ್ಯವಾಗುತ್ತದೆ. ಒಂದೊಂದು ದೇಶದ ಇಲ್ಲವೇ ಒಂದೊಂದು ಕಾಲಮಾನದ ಇತಿಹಾಸವನ್ನು ಈ ಪದ್ಧತಿಯಿಂದ ಕಲಿಸಲಾಗುವದು ಮೊದಲಿಗೆ ಸಾಮಾನ್ಯವಾದ ಪರಿಚಯವನ್ನು ಕೊಡಬೇಕು ಮುಂದಿನ ವರ್ಗ ಗಳಲ್ಲಿ ಅದನ್ನೇ ವಿವರವಾಗಿ ಕಲಿಸಿ ತುಸು ಹೆಚ್ಚಿನ ಸಂಗತಿಗಳನ್ನು ಹೇಳ ಬೇಕು. ಇನ್ನೂ ಮುಂದಿನ ವರ್ಗಗಳಲ್ಲಿ ಹಿಂದೆ ಹೇಳಿದ್ದನ್ನೇ ಇನ್ನೂ ವಿಸ್ತರ ವಾಗಿ ಕಲಿಸಬೇಕು. ಹೆಚ್ಚೇನು ! ಅದೇ ಕಾಲದಿಂದ ಸಾಗಿ, ಬಾಲಕರು ಬೆಳೆ ದಂತೆ ಹೆಚ್ಚು ತಪಸೀಲಾಗಿ ಕಲಿಸುವ ಪದ್ಧತಿಗೆ ಸಮಕೇಂದ್ರ ಪದ್ಧತಿ ಎನ್ನು ವರು

**ಕಾಲಾನುಕ್ರಮ ಪದ್ಧತಿ:—**

ಇದು ಸಮಕೇಂದ್ರ ಪದ್ಧತಿಯನ್ನೇ ಕೆಲಮಟ್ಟಿಗೆ ಹೋಲುವದು. ಕಾ ಲಾನುಕ್ರಮವೆ ಇದರ ವೈಶಿಷ್ಟ್ಯ. ಕಾಲಕ್ರಮಕ್ಕೆ ಅನುಸಾರವಾಗಿ ಐತಿಹಾಸಿಕ

ಸಂಗತಿಗಳನ್ನು ವಿಭಾಗಮಾಡಿ ಒಂದೊಂದು ಭಾಗವನ್ನು ಒಂದೊಂದು ವರ್ಗಕ್ಕೆ ಕಲಿಸುತ್ತ ಹೋಗಬೇಕು.

**ಪಠಣ ಪದ್ಧತಿ:—**

ವಾಡಿಕೆಯಂತೆ ಬಾಲಕರಿಗೆ ಇತಿಹಾಸ ವಿಷಯವನ್ನು ಬಾಯಿಪಾಠ ಮಾಡ ಹಚ್ಚುವದೇ ಪಠಣ ಪದ್ಧತಿ ಎನಿಸುವದು. ಇಸವಿ, ಯುದ್ಧ, ಒಪ್ಪಂದಗಳನ್ನು ಬರೀ ಬಾಯಿಪಾಠ ಮಾಡುವದರಿಂದ ಬಾಲಕನು ಇತಿಹಾಸ ವಿಷಯವನ್ನು ಗ್ರಹಿಸಿದಂತಾಗಲಿಲ್ಲ. ಆದರೆ ಮಂದಬುದ್ಧಿಯ ಹುಡುಗರಲ್ಲಿ ಈ ಪದ್ಧತಿಯು ಕೆಲ ಮಟ್ಟಿಗೆ ಉಪಯೋಗ ಬೀಳಬಹುದು. ಹುಡುಗನು ಜಾಣನಿದ್ದಲ್ಲಿ ಈ ಪದ್ಧತಿಯು ಯಾವ ಫಲವನ್ನೂ ಕೊಡಲಾರದು. ಈ ಪದ್ಧತಿಯನ್ನು ಉಪಯೋಗಿಸುವಾಗ ಶಿಕ್ಷಕನು ಹುಡುಗರ ಬುದ್ಧಿಮತ್ತೆಯನ್ನು ಕಂಡು ಹಿಡಿದಿರಬೇಕು.

**ಡಾಲ್ಟನ್ ಪದ್ಧತಿ:—**

ಈ ಪದ್ಧತಿಯ ಮುಖ್ಯಾಂಶವೆಂದರೆ, ಹುಡುಗರಿಗೆ ಕೆಲವೊಂದು ಪ್ರಶ್ನೆಗಳನ್ನು ಕೊಟ್ಟು, ಅವುಗಳ ಉತ್ತರ ಸಿಗುವಂತಹ ಪುಸ್ತಕಗಳನ್ನು ಹೇಳಿ, ಅವುಗಳ ಸಹಾಯದಿಂದ ಉತ್ತರಗಳನ್ನು ಬರೆಯಲು ಬಾಲಕರಿಗೆ ಹಚ್ಚುವದು. ಮತ್ತು ಇವುಗಳನ್ನು ಶಿಕ್ಷಕನು ತಿಂಗಳಿಗೊಮ್ಮೆ ತಪಾಸಣೆ ಮಾಡಬೇಕು. ಈ ಪದ್ಧತಿಯು ಪ್ರೌಢರಿಗೆ ಮಾತ್ರ ಹೆಚ್ಚು ಉಪಯೋಗವಾಗುವದು. ಅಲ್ಲದೆ, ಇದರಿಂದ ಹೊಸ ಸಂಗತಿಗಳನ್ನು ಕಂಡು ಹಿಡಿದ ಸಂತೋಷವೂ ಅವರಿಗೆ ಆಗುವದು.

**ಪ್ರೊಜೆಕ್ಟ ಪದ್ಧತಿ:—**

ಬಾಲಕರಲ್ಲಿ ಬೇರೆ ಬೇರೆ ಗುಂಪುಗಳನ್ನು ಮಾಡಿ, ಒಂದೊಂದು ಗುಂಪಿಗೆ ಒಂದೊಂದು ಸಮಸ್ಯೆಯನ್ನು ಕೊಡಬೇಕು. ಇವುಗಳನ್ನು ಬಿಡಿಸಲಿಕ್ಕೆ ಬೇಕಾಗುವ ಎಲ್ಲ ಸಲಕರಣೆಗಳನ್ನು (ಪುಸ್ತಕ, ಬೇರೆ ಉಪಕರಣಗಳು ಇತ್ಯಾದಿ) ಒದಗಿಸಬೇಕು. ಮತ್ತು ಸ್ವತಂತ್ರ ವಾತಾವರಣದಲ್ಲಿ ಬಾಲಕರನ್ನು ಸ್ವಪ್ರಯತ್ನಕ್ಕೆ ಹಚ್ಚುವದು.

**ವರ್ಧಾ ಪದ್ಧತಿ.—**

ಈ ಪದ್ಧತಿಯ ಜೀವಾಳವು ಒಂದು ಮೂಲವ್ಯವಸಾಯವಾಗಿರುವದು. ಮೂಲ ವ್ಯವಸಾಯಕ್ಕೂ ಐತಿಹಾಸಿಕ ಸಂಗತಿಗಳಿಗೂ ಶಿಕ್ಷಕನು ತನ್ನ ಜಾಣ್ಮೆಯಿಂದ ಸಂಬಂಧೀಕರಣಮಾಡಿ ಇತಿಹಾಸ ಪಾಠಗಳನ್ನು ಸಾಗಿಸಬೇಕಾಗುವದು. ಆದ್ದರಿಂದ ಐತಿಹಾಸಿಕ ಪುರುಷರ ಚರಿತ್ರೆಯು ಹುಡುಗರಿಗೆ ತಿಳಿಯುವದು. ಆದರೆ ಯುದ್ಧ, ಸುಧಾರಣೆಗಳು ಆಡಳಿತೆ ಮುಂತಾದವುಗಳನ್ನು ಮುದ್ದಾಂ ಸಂಬಂಧೀಕರಣ ಮಾಡಬೇಕಾಗುತ್ತದೆ. ಈ ಯೋಜನೆಯಲ್ಲಿ ಇತಿಹಾಸಕ್ಕೆ ಅಷ್ಟೊಂದು ಮಹತ್ವವು ಕೊಡಲ್ಪಟ್ಟಿಲ್ಲ.

**ಪಠ್ಯ ಪುಸ್ತಕಗಳು.—**

ಇತಿಹಾಸದ ಅಭ್ಯಾಸದಲ್ಲಿ ಪಠ್ಯ ಪುಸ್ತಕಗಳು ಬಹು ಮಹತ್ವದವಾಗಿವೆ ಹುಡುಗರು ಪಠ್ಯಪುಸ್ತಕಗಳನ್ನು ಅನಾದರಿಸಲೂ ಬಾರದು, ಅಥವಾ ಅವುಗಳ ಮೇಲೆಯೇ ಅವಲಂಬಿಸಬಾರದು. ಶಿಕ್ಷಕನಾದರೂ ಪಠ್ಯಪುಸ್ತಕಗಳ ಉಪಯೋಗವನ್ನು ಬಹಳ ಜಾಣತನದಿಂದ ಮಾಡಬೇಕು. ಪಠ್ಯಪುಸ್ತಕಗಳಲ್ಲಿಯ ಸಂಗತಿಗಳು ಹುಡುಗರಿಗೆ ತಿಳಿದಿರಬೇಕಲ್ಲದೆ, ಅವರು ಇತರ ಗ್ರಂಥಗಳಿಂದ ಸಂಗತಿಗಳನ್ನೂ ವಿವರಗಳನ್ನೂ ಕಲೆಹಾಕಿ ಪಠ್ಯಪುಸ್ತಕಗಳಲ್ಲಿಯ ಸಂಗತಿಗಳನ್ನು ಸಬಲ ಮಾಡಿಕೊಳ್ಳಬೇಕು. ಪಠ್ಯಪುಸ್ತಕಗಳು ಕೆಳಗೆ ಕಂಡ ನಿಯಮಗಳಿಗೆ ಒಳಪಟ್ಟಿರಬೇಕು. ಅವೆಂದರೆ:—

(೧) ಇವುಗಳ ಭಾಷೆ ಸರಳವಾಗಿರಬೇಕು.

(೨) ಚಿತ್ರ, ನಕಾಶ, ಪಟಗಳು ತಕ್ಕಂಥವೂ, ಸಾಕಷ್ಟೂ ಇರಬೇಕು.

(೩) ಸಂಗತಿಗಳ ವಿವರಣೆ ಸಾಕಷ್ಟಿದ್ದು ಚೆನ್ನಾಗಿ ಕ್ರಮಬದ್ಧವಿರಬೇಕು.

(೪) ಹಳೆಯ ಸಂಗತಿಗಳೊಂದಿಗೆ ಇಂದಿನ ಸಂಗತಿಗಳನ್ನು ಹೊಂದಿಸಿ ಬರೆದಿರಬೇಕು.

(೫) ಇವು ಸತ್ಯಸಂಗತಿಗಳನ್ನರುಹಬೇಕು.

(೬) ಹೊಸ ಸಂಶೋಧನಗಳನ್ನರುಹಿ, ಅವುಗಳಿಂದ ಲಬ್ಧವಾದ ಸಂ-

ಗತಿ ವಿಶೇಷಗಳನ್ನು ಸಂದರ್ಭಕ್ಕನುಸಾರವಾಗಿ ಯೋಗ್ಯ ಕಾಲಕ್ಕೆ ತಿಳಿಸುತ್ತಿರ ಬೇಕು

(೭) ಪಾರಿಭಾಷಕ ಶಬ್ದ ವೈಚಿತ್ರ್ಯ, ಶಬ್ದಾರ್ಥ ಪರಿವಿಡಿಗಳನ್ನು ಉಲ್ಲೇಖಿಸಿರಬೇಕು.

(೮) ಪಠ್ಯಪುಸ್ತಕಗಳು ಹೆಬ್ಬೊತ್ತಿಗೆ (ಉದ್ಗ್ರಂಥವಾಗಿರದೆ) ಯಾಗಿ ರದೆ ಯೋಗ್ಯಗಾತ್ರವುಳ್ಳದ್ದೂ ಸುಂದರವೂ ಆಗಿರಬೇಕು

**ಇತಿಹಾಸ ಶಿಕ್ಷಣದಲ್ಲಿ ಸಾಧನಗಳ ಮಹತ್ವ.—**

ಇತಿಹಾಸವನ್ನು ಬಾಲಕರ ಮನಮುಟ್ಟುವಂತೆ ಕಲಿಸುವದಾದರೆ ಕೆಲವು ಸಾಧನಗಳ ಅಥವಾ ಉಪಕರಣಗಳ ಉಪಯೋಗವನ್ನು ಮಾಡಬೇಕಾಗು ವದು ಮೇಲಾಗಿ ಸಾಧನಗಳು ಇತಿಹಾಸದ ಅಧ್ಯಾಪನದಲ್ಲಿ ಬಹಳೇ ಪರಿ-ಣಾಮಕಾರಿಯಾಗುವವು. ಆದ್ದರಿಂದ ಇತಿಹಾಸ ಶಿಕ್ಷಕನು ಉಪಕರಣಗಳನ್ನು ಮತ್ತು ಅವುಗಳ ಉಪಯೋಗವನ್ನು ಚನ್ನಾಗಿ ಅರಿತಿರಬೇಕು. ಅವುಗಳ ವಿವರವು ಕೆಳಗಿನಂತಿದೆ

(೧) ಐತಿಹಾಸಿಕ ಚಿತ್ರಗಳು — ಇವು ಲಬ್ಧವಿದ್ದಲ್ಲಿ ಶಿಕ್ಷಕನು ಅವಶ್ಯ ವಾಗಿ ಅವುಗಳನ್ನು ತರಿಸಿಕೊಂಡು ಇಟ್ಟುಕೊಳ್ಳಬೇಕು. ಅಲ್ಲದೆ, ಕೆಲವು ಚಿತ್ರಗಳನ್ನು ಶಿಕ್ಷಕನು ತನ್ನ ಕಲ್ಪನೆಯಿಂದ ರಚಿಸಿ, ಹುಡುಗರಿಂದ ತಯಾರ ಮಾಡಿಸಿಕೊಳ್ಳಬಹುದು. ಸಕಾಲಕ್ಕೆ ಇವುಗಳನ್ನು ಉಪಯೋಗ ಮಾಡುವ ದರಿಂದ ಪಾಠವು ಬಹಳೇ ಪರಿಣಾಮಕಾರಿಯಾಗುವದು.

(೨) ಆಕೃತಿ, ನಕಾಶ, ನಮೂನೆಗಳು ಇತಿಹಾಸದ ಅಧ್ಯಾಪನದಲ್ಲಿ ಬಾಲಕರನ್ನು ವಿಚಾರ ಮಾಡಲಿಕ್ಕೆ ಹಚ್ಚುತ್ತವೆ. ರಣರಂಗದ ಆಕೃತಿ, ದಾಳಿಯ ಮಾರ್ಗದ ನಕಾಶ, ವಿದೇಶಿ ಜನರ ನಮೂನೆಗಳು ಬಾಲಕರಲ್ಲಿ ಜಯಾಪಜಯಗಳ ಕಾರಣಗಳ ಕಲ್ಪನೆ ಮುಂತಾದವುಗಳನ್ನು ಹುಟ್ಟಿಸುವವು. ಪಾಠವು ಸಾಗಿರುವಾಗ ಆಕೃತಿಗಳನ್ನು ಚಿತ್ರಿಸುವ ಜಾಣ್ಮೆಯು ಶಿಕ್ಷಕರಲ್ಲಿರು ವದು ಒಳಿತು.

(೩) ವಂಶಾವಳಿಗಳು:— ಪಟ್ಟಕ್ಕೆ ಸಂಬಂಧಿಸಿದ ಬಾಧ್ಯಸ್ಥರು

ಮುಂತಾದ ಸಂಗತಿಗಳನ್ನು ತಿಳಿದುಕೊಳ್ಳಲು ಇವು ಬಹಳ ಉಪಯೋಗ ಬೀಳುವವು.

(೪) "ನಟನೆ" ನೋಡಿರಿ.

(೫) ಕರೆ ಹಲಿಗೆಯ ಟಿಪ್ಪಣಿ ನೋಡಿರಿ

(೬) ಐತಿಹಾಸಿಕ ಚರ್ಚೆ, ಸಂಭಾಷಣೆಗಳೂ ಇತಿಹಾಸದ ಅಭ್ಯಾಪ ಸದಲ್ಲಿ ಸಹಾಯ ಮಾಡುವವು ಐತಿಹಾಸಿಕ ವ್ಯಕ್ತಿಗಳ ಗುಣದೋಷಗಳಿ ಗಾಗಿ ಅಥವಾ "ಆಳಿಕೆಯಿಂದಾದ ಲಾಭ ಹಾನಿಗಳು" ಎಂಬ ವಿಷಯದ ಮೇಲೆ ಚರ್ಚೆ ನಡಿಸಬಹುದು.

(೭) ಐತಿಹಾಸಿಕ ಉತ್ಸವಗಳು -- ಇವುಗಳಲ್ಲಿ ಭಾಗವಹಿಸುವದ ರಿಂದ ಹುಡುಗರಿಗೆ ಐತಿಹಾಸಿಕ ಎಷ್ಟೋ ಸಂಗತಿಗಳು ಕಲಿಸದೇ ತಿಳಿಯು ವವು. ಉತ್ಸವಗಳು, ಪ್ರಸಿದ್ಧಿಯನ್ನು ಪಡೆದ ವ್ಯಕ್ತಿಗಳಿಗೂ, ಸಂಗತಿಗಳಿಗೂ ಸಂಬಂಧಪಟ್ಟವುಗಳಿರಬೇಕು ಸುವ್ಯವಸ್ಥಿತವಾದ ಕಾರ್ಯಕ್ರಮವನ್ನು ಮುಂ ಚಿತವಾಗಿ ಗೊತ್ತುಪಡಿಸಿ, ಭಾಷಣ, ಕಾವ್ಯ, ಲಾವಣಿ, ಮುಂತಾದವುಗಳಿಗೆ ಉತ್ತೇಜನ ಕೊಡಬೇಕು. ಪ್ರಸಂಗದ ಅಥವಾ ವ್ಯಕ್ತಿಯ ಸವಿಸ್ತಾರವಾದ ಮತ್ತು ಮನೋರಂಜಕವಾದ ವರ್ಣನೆಯು ಅವಶ್ಯಕ.

(೮) ಆಟ -- ವರ್ಗದಲ್ಲಿ ಎರಡು ಪಂಗಡ ಮಾಡಿ ಇತಿಹಾಸ ಪಾ- ಠಕ್ಕೆ ಸಂಬಂಧ ಪಟ್ಟ ಆಟಗಳನ್ನು ಆಡಿಸಬಹುದು.

(೯) ಐತಿಹಾಸಿಕ ಪ್ರವಾಸ -- ಹಳೇ ಕೋಟೆ, ದೇವಸ್ಥಾನ, ರಾಜ ಧಾನಿ, ಮತ್ತು ಪುರಾಣ ವಸ್ತು ಸಂಗ್ರಹಾಲಯ ಮುಂತಾದವುಗಳಿಗೆ ಇತಿಹಾಸ ಅಭ್ಯಾಸದ ಗುರಿಯನ್ನಿಟ್ಟುಕೊಂಡು ಪ್ರವಾಸ ಬೆಳಿಸಬೇಕು. ಪ್ರವಾಸಗಳಿಂದ ತಿಳುವಳಿಕೆಯೂ, ವಿನೋದವೂ ಆಗುವವು.

(೧೦) ಇತಿಹಾಸಕ್ಕೆ ಸಂಬಂಧಿಸಿದ ವಸ್ತುಗಳನ್ನು (ಉದಾ - ನಾಣ್ಯ ಗಳು, ತಿಕೀಟುಗಳು, ಇ) ಸಂಗ್ರಹಿಸುವದಕ್ಕೆ ಬಾಲಕರಿಗೆ ಉತ್ತೇಜನ ಕೊಡ ಬೇಕು.

ಇತಿಹಾಸ ಮಂದಿರ.— ಅಭ್ಯಾಸ ಕ್ರಮದಲ್ಲಿಯ ಇತರ ವಿಷಯಗಳಿಗೆ

ಅಂದರೆ, ಡ್ರಾಯಿಂಗ, ರಸಾಯನ, ಶಾಸ್ತ್ರೀಯ ವಿಷಯಗಳಿಗೆ ಇತ್ತೀಚಿಗೆ ಬೇರೆ ಬೇರೆ ಕೋಣೆಗಳು ಮೀಸಲಾಗಿರುತ್ತವೆ. ಆದ್ದರಿಂದ ಇತಿಹಾಸಕ್ಕೂ ಒಂದು ಕೋಣೆ ಅಥವಾ ಮಂದಿರವು ಮೀಸಲಾಗಿರಬೇಕೆಂಬ ಕಲ್ಪನೆಯು ಒಡಮೂಡತೊಡಗಿದೆ. ಇಲ್ಲಿ ಹುಡುಗರು ಕೂಡಹಾಕಿಟ್ಟ ಇತಿಹಾಸವಸ್ತುಗಳ ಒಂದು ಪ್ರದರ್ಶನವಿರಬೇಕು.

ಕೆಲವರು ಇತಿಹಾಸಮಂದಿರದಲ್ಲಿ ಕಾಲಮಾನ ರೇಷೆಯನ್ನು ಗೋಡೆಗುಂಟ ಬರೆದಿರಬೇಕೆನ್ನುವರು. ಈ ಗೆರೆಯ ಮೇಲೆ ಶತಮಾನಕ್ಕೊಂದು ಮೊಳೆಯನ್ನು ಸಿಕ್ಕಿಸಿರಬೇಕು. ಈ ಮೊಳೆಗೆ ಆಯಾ ಶತಮಾನದ ಸಂಗತಿಗಳನ್ನೂ, ವ್ಯಕ್ತಿಯ ಚಿತ್ರವನ್ನೂ ಸಿಕ್ಕಿಸಿ ಇತಿಹಾಸದ ಪಾಠವನ್ನು ಕಲಿಸಬೇಕು.—ಎಂದು ಹೇಳುವದುಂಟು.

## ೨. ಮಾನವ ಪ್ರಗತಿಯ ಕಥೆ.

### ಭೂಮಿಯ ಹುಟ್ಟು:—

ಅತಿ ಪ್ರಾಚೀನ ಕಾಲದಲ್ಲಿ ಈ ನಮ್ಮ ಜಗತ್ತು ಸೂರ್ಯನಿಂದ ಒಡೆದು ಬಂದ ಒಂದು ಗ್ರಹವೆಂದು ಹೇಳುತ್ತಾರೆ. ಎಷ್ಟೋ ವರ್ಷಗಳ ವರೆಗೆ ವಾಯುರೂಪದಲ್ಲಿದ್ದು, ಬರಬರುತ್ತ ದ್ರವಪದಾರ್ಥವಾಗಿ, ಕೊನೆಗೆ ಘನರೂಪ ಹೊಂದಿತಂತೆ. ಏನಿದ್ದರೂ ನಮ್ಮ ಜಗತ್ತಿನ ಮೇಲೆ ನೀರು, ನೆಲ, ಮತ್ತು ಹವೆ, ಅನಂತರೂಪದಲ್ಲಿ ಕಾಣುತ್ತವೆ.

ನೀರು ಹವೆ ಮೊದಲಾದ ಮಹಾಭೂತಗಳು ಒಂದು ಹದಕ್ಕೆ ಬಂದಾಗ ಜೀವಿ ಹಾವಸೆ ರೂಪದಲ್ಲಿ ಮೊದಲು ಕಂಡದ್ದು. ಇದು ನೀರ ಮೇಲೆ ಕಂಡಿತಂತೆ. ತನ್ನ ಆಹಾರ, ಸೌಖ್ಯ ಮುಂತಾದವುಗಳಿಗಾಗಿ ತನ್ನ ದೇಹವನ್ನು ಮಾರ್ಪಡಿಸಿಕೊಳ್ಳುತ್ತಾ ಬೆನ್ನೆಲುವಿಲ್ಲದ ಪ್ರಾಣಿರಾಶಿಯಿಂದ

ಬೆನ್ನೆಲುವಿದ್ದ ಪ್ರಾಣಿಯು ಬಂದಿತು. ಆಗ ನೀರು ನೆಲವಾಗಿಯೂ ನೆಲವು ನೀ ರಾಗಿಯೂ ಇತ್ತು. ಅಂದರೆ ಮೊದಲು ಜಲ ಚರ ಪ್ರಾಣಿಗಳು ಬೆಳೆದು ನಂತರ ಭೂಜಲಚರ ಪ್ರಾಣಿಗಳು ಹುಟ್ಟಿದವು. ಬಳಿಕ ಎಷ್ಟೋ ಸ್ಥಿ-ತ್ಯಂತರಗಳು ಆಗಿ ಮಂಗನ ಸ್ವರೂಪ ತಳೆದಿತು. ಮುಂದೆ ಗೊರಿಲ್ಲಾನಿಂದ ಮನುಷ್ಯನ ಶರೀರ ಮಾರ್ಪಟ್ಟಿತೆಂದು ಹೇಳಿಕೆ ಆದೆ. ಅಂತೂ ಮನುಷ್ಯನು ಮೊದಲು ತೋರಿಕೊಂಡದ್ದು, ೫೦,೦೦೦ ವರ್ಷಗಳಾಚೆಗೆ. ಆಗ ಮಿಕ್ಕ ಪ್ರಾಣಿಗಳಂತೆ ಮನುಷ್ಯನು ಆಹಾರ ನಿದ್ರಾ ಭಯ ಮೊದಲಾದ ಶರೀರಜನ್ಯ ಕೆಲಸಗಳನ್ನಷ್ಟೇ ಸಾಗಿಸುತ್ತಿದ್ದನು.

**ಗವಿ ಮನುಷ್ಯ:—**

ಕಾಲಗತಿಯಲ್ಲಿ ಮನುಷ್ಯನು ತಲೆದೋರಿದ ವೇಳೆಯನ್ನು ಖಂಡಿತವಾಗಿ ಹೇಳಲು ಬರುವಂತಿಲ್ಲ. ನಮ್ಮ ದೇಶದಲ್ಲಿ ಮೊದಲು ಕಂಡದ್ದು, ಡೆಕ್ಕನ್ನಿ ನಲ್ಲಿ ಎಂದು ಸಬಲವಾದತರ್ಕವಿದೆ. ಆಗ ದಖ್ಖನ್ ಇದು ಈಗಿನಂತೆ ಸಮು ದ್ರಗಳಿಂದ ಸುತ್ತಲ್ಪಟ್ಟಿರದೆ, ಈಗ ಹಿಂದೀ ಮಹಾಸಾಗರವಿರುವಲ್ಲೆಲ್ಲ ನೆಲವೇ ಹಬ್ಬಿ ದೆಖ್ಖನ್, ಆಫ್ರಿಕಾ, ಆಸ್ಟ್ರೇಲಿಯಾಗಳೊಂದಾಗಿದ್ದವು. ಆಗ ದೆಖ್ಖನ್ನಿನ ಬಾಗವು ವಾಸಯೋಗ್ಯವಾಗಿತ್ತು. ಗಂಗಾ ನದಿಯ ಬಯಲು ಇನ್ನೂ ಸಿದ್ಧವಾಗುವದರಲ್ಲಿ ಇತ್ತು. ಆಗ ದಖ್ಖನ್ನಿನ ಹಲಕೆಲವು ಕಡೆಗೆ ಮನುಷ್ಯರು ವಾಸಿಸುತ್ತಿದ್ದರು

ಇವರು ಬೇಟೆಯಿಂದಲೂ ಮೀನ ಹಿಡಿಯುವದರಿಂದಲೂ ಜೀವಿಸುತ್ತ ಯಾವ ಲೋಹವನ್ನೂ ಅರಿಯದೆ, ಯಾವದಕ್ಕೂ ಕಲ್ಲಿನ ಚೂರನ್ನೆ ಉಪಯೋಗಿಸಿಸುತ್ತಿದ್ದರು. ವಸನಕ್ಕಾಗಿ ಸತ್ತ ಪಾಣಿಗಳ ಚರ್ಮವನ್ನೂ ಗಿಡದ ತೊಗಟೆಯನ್ನೂ ತೊಪ್ಪಲದ ಗುಂಪನ್ನೂ ಬಳಿಸಿದರು. ವಸತಿಗಾಗಿ ಗಿಡದ ಹೊದರು, ಇಲ್ಲವೆ ಬಂಡೆಗಳ ಪೊಳ್ಳುಗಳನ್ನು ಹುಡುಕಿದರು; ಗವಿ ಗಳನ್ನೂ ಅಸಡ್ಡೆಯಾದ ಗುಡಿಸಲಗಳನ್ನೂ ಒಮ್ಮೊಮ್ಮೆ ಕಟ್ಟಿರಬಹುದು. ಇವರಿಗೆ ಬಹುಶಃ ಬೆಂಕಿ ಗೊತ್ತಿರಲ್ಲಿಲ್ಲ. ಹಲಕೆಲವರು ಮಾತ್ರ ಕಂಡುಹಿ ಡಿದಿರಬೇಕು. ಯಾವದಕ್ಕೂ ಕಲ್ಲು, ಕಟ್ಟಿಗೆಯ ತುಂಡು, ಎಲಬುಗ ಳನ್ನು ಬಳಿಸಿದರು.

ಮೊದಮೊದಲು ಇವರ ಮಾತುಗಳೆಂದರೆ — ಬೇಕು ಬೇಡಗಳನು ತಿಳಿಸುವ ಅಂಗವಿಕ್ಷೇಪಗಳು. ಬರಬರುತ್ತ ಮನೀಷೆ ಅಥವಾ ಮನದೊಲನವನ್ನು ತಿಳಿಸಲು ಧ್ವನಿಯನ್ನು ಬಳಿಸಿದರು. ಆಗ ಅಂಜಿಕೆ, ಆನಂದ ಕಳವಳಗಳನ್ನು ತಿಳಿದು ತಿಳಿಸಲು ಕೂಗಿರಬಹುದು. ಸಮೀಪ ಇದ್ದಾಗ ಕಣ್ಣು ತುಟಿಗಳನ್ನು ಅಲ್ಲಾಡಿಸಿ ತನ್ನ ಇಚ್ಛೆ ಅಥವಾ ಭಾವವನ್ನು ವ್ಯಕ್ತಗೊಳಿಸಿರಬಹುದು. ಬರಬರುತ್ತ ಇಂತಹ ಭಾವನೆಗೆ ಇಂತಹ ಧ್ವನಿ ಎಂದು ಗೊತ್ತುಪಡಿಸಿರಬಹುದು. ಕಾಲ ಕಳೆದು ಈ ಕೂಗೇ ಮಾತುಗಳ ಉಚ್ಚಾರಣೆಗುಲ್ಲಿ ಪರಿಣಮಿಸಿರಬಹುದು ಆಹಾರಕ್ಕಾಗಿ ಹಸಿ ಮಾಂಸ, ಹಣ್ಣು ಮುಂತಾದ್ದನ್ನು ಉಪಯೋಗಿಸಿದರು

**ಬೆಂಕಿಯ ಶೋಧ:—**

ಆಹಾರವನ್ನರಿಸುತ್ತ ಮನುಷ್ಯ ಪ್ರಾಣಿಯು ಅಡಿವೆಯಿಂದ ಅಡವಿಗೆ ಅಲೆಯುತ್ತಿರುವಾಗ ದಾವಾಗ್ನಿಯಿಂದ ಸುಟ್ಟು ಕಪ್ಪಾದ ಮರಗಳನ್ನು ಅವನು ಮೊದಲು ಕಂಡಿರಬಹುದು ಸಿಡಿಲುಗಳ ಹೊಡೆತಕ್ಕೆ ನೆಲಕ್ಕುರುಳಿದ ಗಿಡಗಳನ್ನು ನೋಡಿರಬಹುದು ಎಷ್ಟೋ ಕಡೆಗೆ ಬಿಸಿ ನೀರಿನ ಸೆಲೆಗಳನ್ನು ಕಂಡು ಹಿಡಿದಿರಬಹುದು. ಇವು ಚಳಿಯಿಂದ ಕಾಪಾಡಿಕೊಳ್ಳಲು ಹಿತಕಾರಿಎನಿಸಿದವು. ಒಮ್ಮೊಮ್ಮೆ ಉಷ್ಣತೆಯ ಕಾರಣವನ್ನು ತಿಳಿಯಲು ಉತ್ಸುಕನಾದಾಗ ಎದುರಿಗಿದ್ದ ಮರದ ಟೊಂಗೆಗಳು ಒಂದಕ್ಕೊಂದು ತಿಕ್ಕಿ ಬೆಂಕಿ ಬಿದ್ದಿರಬಹುದು. ಅದರಂತೆ ಚಳಿಯಿಂದ ನಡುಗುವಾಗ ಅಂಗೈಗಳನ್ನು ಒಂದಕ್ಕೊಂದು ತಿಕ್ಕಿದಾಗ ಹೊರಡುವ ಉಷ್ಣತೆಯು ಆವನಲ್ಲಿ ವಿಚಾರವನ್ನು ಹುಟ್ಟಿಸಿರಬಹುದು. ಮುಂದೆ ಮರದ ತುಂಡುಗಳನ್ನು ಒಂದಕ್ಕೊಂದು ತಿಕ್ಕಿದಾಗ ತೋರಿಸಿಕೊಂಡ ಬೆಂಕಿಯು ಅವನಿಗೆ ವಿಶೇಷ ಆನಂದವನ್ನುಂಟು ಮಾಡಿರಬಹುದಲ್ಲವೆ ?

ಈ ರೀತಿಯಲ್ಲಿ ಅಡವಿಯಲ್ಲಿಯ ಗಿಡಗಳಿಗೆ ಬೆಂಕಿ ಹತ್ತಿದಾಗ ಹತ್ತಿರದ ಪಶುಪಕ್ಷಿ ಕ್ರಿಮಿ ಕೀಟಕಗಳು ಅದರಲ್ಲಿ ಬಿದ್ದು ಸತ್ತಿರಬಹುದು. ಅವುಗಳ ಸ್ಥಿತಿ ಏನೆಂದು ತಿಳಿಯಲು ಮನುಷ್ಯನು ಸುಟ್ಟ ದೇಹಗಳಲ್ಲಿ ಬೆರಳನ್ನಿಕ್ಕಿರಬಹುದು. ಒಳಗಿನ ಚುರುಕಿನಿಂದ ಬೆರಳನ್ನು ಬಾಯಿಗಿಟ್ಟುಕೊಂಡನು. ಬೆಂಕಿಗೆ ಹತ್ತಿದ ಬೆಂದ ಮಾಂಸವು ಹೆಚ್ಚು ರುಚಿಯಾಗಿದ್ದುದನ್ನು ಮನುಷ್ಯನು









ಆದಿ ಮಾನವನ ವಸ್ತ್ರ, ವಸತಿ, ಆಹಾರ, ಆಯುಧಗಳು.

ಕಂಡುಕೊಂಡಿರಬಹುದು ಇವೆಲ್ಲ ಕಾರಣಗಳಿಂದ ಮನುಷ್ಯನು ಬೆಂಕಿಯನ್ನು ಹುಟ್ಟಿಸುವ ಕಾಯ್ದಿಡುವ ವಿಧಾನ ಮತ್ತು ಅದರ ವಿವಿಧ ಉಪಯೋಗ ಗಳನ್ನು ಕಂಡುಹಿಡಿದನು.

**ಭೂಮಿಯ ಸಾಗುವಳಿ:—**

ಇಂದು ನಾವು ತಿನ್ನುವ ಅನೇಕ ಆಹಾರಧಾನ್ಯಗಳು ಹುಲ್ಲಿನ ರೂಪಾಂತರಗಳೆಂದು ಬೇರ ಹೇಳಬೇಕಾಗಿಲ್ಲ. ಈ ಹುಲ್ಲಿನ ಧಾನ್ಯಗಳನ್ನು ಪ್ರಕೃತಿಯಲ್ಲಿದ್ದಂತೆಯೇ ಹರಿದು ತಿಂದಾಗ ಅದರ ಕೆಲವು ಕಾಳುಗಳು ನೆಲಕ್ಕುದಿರಿದವು. ಮಳೆ ಒದಲು ಅವು ಮೊಳೆತು ಬೇರೆ ಸಸಿಗಳಾದದ್ದು ಕಂಡು ಬಂದಿತು. ಕಟ್ಟಿಗೆಯ ತುಂಡಿನಿಂದ ನೆಲವನ್ನು ಅಗಿದು ಬೀಜ ಬಿತ್ತಲು ಮಳೆಗಾಲದಲ್ಲಿ ಅವು ಮೊಳೆತವು ಇದೇ ರೀತಿಯಲ್ಲಿ ಹಣ್ಣು ತಿನ್ನುವಾಗ ನಲಕ್ಕೆ ಬಿದ್ದ ಬೀಜಗಳೂ ಮೊಳಕೆಯೊಡೆದವು. ಇದಲ್ಲದೆ ಪಕ್ಷಿಗಳು ಹಣ್ಣುತಿನ್ನುವಾಗ ಬೀಜಗಳು ನೆಲಕ್ಕೆ ಬೀಳುವವು ಇದಾದರೂ ಮನುಷ್ಯನಿಗೆ ಸಾಗುವಳಿಯ ಕಲ್ಪನೆಯನ್ನು ಕೊಟ್ಟಿರಬಹುದು ಕೆಲವೊಂದು ಭೂಮಿಯನ್ನು ಅಗೆದು, ಬೀಜಹಾಕಿ, ನೀರುಣಿಸಿ, ಹಸಿರು ಪೈರಿನ ದಾರಿಯನ್ನು ಮನುಷ್ಯನು ನೋಡುತ್ತಿದ್ದರೆ ಆಶ್ಚರ್ಯವಲ್ಲ. ಈ ರೀತಿಯಲ್ಲಿ ಮನುಷ್ಯನು ಒಕ್ಕಲಿಗನಾಗಿರಬಹುದು.

**ಪ್ರಾಣಿಗಳು ಈಲಾದವು:—**

ಮೊಟ್ಟ ಮೊದಲು ಮನುಷ್ಯನು ಹೊಟ್ಟೆ ಪಾಡಿಗಾಗಿ ಅಟವಿಗಳಲ್ಲಿ ಸುತ್ತಾಡಿ ಹಸಿಮಾಂಸವನ್ನೂ ಹಣ್ಣುಹಂಪಲಗಳನ್ನೂ ತಿನ್ನುತ್ತಿದ್ದಾಗ ತೋಳದಂಥ ಪ್ರಾಣಿಯೊಂದು ಅವನ ಉಚ್ಛಿಷ್ಟವನ್ನು ತಿಂದು ಬದುಕಲಿಕ್ಕೆ ಹಿಂಬಾಲಿಸಿರಬೇಕು. ಆಹಾರವು ಸಿಕ್ಕು ಹಸಿವೆಯು ತಣಿದಂತೆ ಮನುಷ್ಯನ ಮೇಲೆ ಈ ಪ್ರಾಣಿಯ ನಂಬಿಗೆಯು ಕುಳಿತಿರಬಹುದು. ಇದೇ ಮುಂದೆ ಅವನ ಬೇಟೆಯ ಕೆಲಸದಲ್ಲಿ ಸಹಾಯ ಮಾಡಿತು. ಬರಬರುತ್ತ ನಾಯಿಯು ಮನುಷ್ಯನ ನಂಬಿಗೆಯ ಸಾಕು ಪ್ರಾಣಿಯಾಯಿತು. ಆಕಳು, ಎತ್ತು, ಕುದುರೆ, ಎಮ್ಮೆ, ಕೋಣ, ಕುರಿ, ಆಡು, ಕೋಳಿ, ಮುಂತಾದವು ಕಾಲಕಳೆದಂತೆ ಮನುಷ್ಯನ

ಅವಶ್ಯಕತೆಗಳನ್ನು ಒಂದಿಲ್ಲೊಂದು ರೀತಿಯಲ್ಲಿ ಪೂರೈಸಿ ಅವನ ಸಾಕಿದ ಪ್ರಾಣಿಗಳೆನಿಸಿದವು.

**ಮನುಷ್ಯನು ಮನೆ ಕಟ್ಟಿಕೊಂಡನು:—**

ಪ್ರಾರಂಭದಲ್ಲಿ ಮನುಷ್ಯನು ವಸತಿಗಾಗಿ ಗಿಡದ ಮತ್ತು ಬಂಡೆಗಳ ಪೊಳ್ಳುಗಳನ್ನು ಹುಡುಕಿದನು. ಗವಿಗಳಲ್ಲಿ ಇವನು ವಾಸಿಸಿರಬಹುದು. ಇವುಗಳ ಉಪಯುಕ್ತತೆಯು ಚಳಿಗಾಳಿಗಳಿಂದ ತನ್ನನ್ನು ರಕ್ಷಿಸಿಕೊಳ್ಳುವದರ ಲ್ಲಿದ್ದಿತು. ನಿಸರ್ಗದಲ್ಲಿ ಕಲ್ಲುಗಳು ಒಂದರ ಮೇಲೊಂದು ಬಿದ್ದು ಗೋಡೆಯು ರಚಿತವಾದದ್ದನ್ನು ಕಂಡಿರಬಹುದು. ಇಂಥ ಮೂರು ಗೋಡೆಗಳ ಮೇಲೆ ಗಾಳಿಯಿಂದ, ಒಣಗಿದ ತೊಪ್ಪಲು ಮತ್ತು ಬಿದಿರುಗಳು ಬಿದ್ದಾಗ, ಅದು ಚಪ್ಪರದ ಕಲ್ಪನೆಯನ್ನು ಕೊಟ್ಟಿತು. ಆದ್ದರಿಂದ ಗೋಡೆಗಳನ್ನು ಕಟ್ಟಿ, ಚಪ್ಪರ ಹಾಕುವ ಕಲ್ಪನೆಯನ್ನು ನಿಸರ್ಗವು ಮನುಷ್ಯನಿಗೆ ಕೊಟ್ಟಿರ ಬಹುದಲ್ಲವೆ ?

ಮನುಷ್ಯನು ದಿನದ ಉಪಯೋಗಕ್ಕಾಗಿ ಪಾತ್ರೆಗಳನ್ನು ನಿರ್ಮಿಸಿಕೊಂ ಡದ್ದು, ಅವನ ಬುದ್ಧಿಯ ಲಕ್ಷಣವಾಗಿದೆ ಮೊದಮೊದಲು ಗಿಡದ ಪೊಗ ಟೆಗಳು, ಬಿದಿರುಗಳ ಪೊಳ್ಳುಗಳು ಪಾತ್ರೆಗಳ ಕೆಲಸವನ್ನು ಪೂರೈಸಿರಬಹುದು. ಕಾಲ ಕಳೆದಂತೆ ಪಾತ್ರೆಗಳು ಕಲ್ಲಿನಿಂದ ರಚಿತವಾದವು. ಮಣ್ಣಿನ ಪಾತ್ರೆ ಗಳು ಮನುಷ್ಯನ ಬುದ್ಧಿಮತ್ತೆಯಲ್ಲಿ ಮುಂದಿನ ಹೆಜ್ಜೆಯನ್ನು ತೋರಿಸುತ್ತವೆ. ಇವುಗಳ ಮೇಲೆ ಚಿತ್ರ, ಕಲಾಕೃತಿಗಳ ಮಾಡಿದ ಮನುಷ್ಯನು ನಮಗೆ ಸಮೀ ಪದವನೇ ಎನ್ನಬಹುದು. ಪಾತ್ರೆಗಳ ಬಳಿಕೆಯು ಹೆಚ್ಚಾದಂತೆ ಅವುಗಳನ್ನು ಹೇರಳವಾಗಿ ಹೊರಗೆಡಹುವ 'ತಿಗರಿ'ಯು ಶೋಧವಾಯಿತು

ಒಟ್ಟಾರೆ, ಒಕ್ಕಲತನಕ್ಕೆ ಕೈಕೊಟ್ಟದ್ದು, ಗುಡಿಸಲುಗಳಲ್ಲಿ ವಾಸ, ಪಾತ್ರೆ ಗಳ ಉಪಯೋಗ, ಸಾಕಿದ ಪ್ರಾಣಿಗಳಿಂದ ಸಹಕಾರ ಸಂರಕ್ಷಣೆಗಳನ್ನು ಪಡೆ ದದ್ದು ಮುಂತಾದವು ಅವನ ಪ್ರಗತಿ ಮಾರ್ಗದಲ್ಲಿ ಹೊಸತನವನ್ನು ಬೀರ ಹತ್ತಿದವು. ಈ ಕಾಲದಲ್ಲಿ ಮನುಷ್ಯನು ಕುಟುಂಬ ಜೀವನಕ್ಕೆ ಯೋಗ್ಯ ನಾಗಿದ್ದಾನೆ ಕುಟುಂಬದ ರಕ್ಷಣೆಯ ಹೊಣೆಯನ್ನು ಈತನು ಹೊಂದಿದ್ದಾನೆ. ದಿನಗಳು ಕಳೆದಂತೆ, ಈ ತೆರನಾದ ಜೀವನದಿಂದ ಮನುಷ್ಯನಿಗೆ

ಪ್ರಗತಿಯು ಸಿಗಹತ್ತಿತು  ಒಕ್ಕಲತನವು ಬೆಳೆದಂತೆ ಮನುಷ್ಯನು ಒತ್ತಟ್ಟಿಗೆ ಕಾಲೂರಿ ನಿಂತು ಜೀವನ ಸಾಗಿಸುವಂತಾಯಿತು. ಹೊಳೆ ಹಳ್ಳಗಳ ದಂಡೆ ಗುಂಟೆ ಒಕ್ಕಲತನವು ಸುಗಮವಾಗಿ ಸಾಗುವದರಿಂದ ಅವನು ಅಲ್ಲಿಯೆ ನೆಲೆಸ ತೊಡಗಿದನು ಭೂಮಿಯು ಯೋಗ್ಯ ಕಂಡಲ್ಲಿ ಒಕ್ಕಲುತನವನ್ನು ಪ್ರಾರಂಭ ಮಾಡಿದನು  ನದಿಗಳಲ್ಲಿ ತೇಲಿ ಹೋಗುವ ಕಟ್ಟಿಗೆಗಳ ಮೇಲೆ ಕುಳಿತು ಹೋಗುವ ಪಕ್ಷಿ, ಕ್ರಿಮಿ, ಕೀಟಕಗಳನ್ನು ಕಂಡು ಮನುಷ್ಯನು ತಪ್ಪಗಳ ಕಲ್ಪ ನೆಯನ್ನು ಮಾಡಿಕೊಂಡನು. ತಪ್ಪವು ನದಿ ತೀರದಲ್ಲಿದ್ದ ಮತ್ತೊಂದು ಗುಂಪಿ ನ ಕೂಡ ಸಂಪರ್ಕ ಬೆಳಿಸುವಂತಾಯಿತು  ಇದರಿಂದ ತಮ್ಮಲ್ಲಿ ತಯಾರಾ ದ ವಸ್ತುಗಳನ್ನು ಕೊಟ್ಟು ತಮಗೆ ಅವಶ್ಯಕವಾದ ವಸ್ತುಗಳನ್ನು ಕೊಂಡು ಕೊಳ್ಳುವಂತಾಯಿತು  ಮೊದಮೊದಲು ನದೀ ಮುಖಾಂತರವೇ ಸಾರಿಗೆಯು ಸಾಗಿತು  ಕಾಲಗತಿಯಲ್ಲಿ ಮನೆಯಿಂದ ಹೊಲ ಮತ್ತು ಹೊಲದಿಂದ ಮ ನೆಗೆ ಬರುವ ಭೂಭಾಗವು "ದಾರಿ" ಅಥವಾ ಹಾದಿಯೆನಿಸಿತು. ಅದೇ ಭೂಭಾಗವನ್ನು ತುಳಿದು ತುಳಿದು ಕಾಲು ದಾರಿಯನ್ನು ಮಾಡಿಕೊಂಡರು. ಜವುಗು ಅಥವಾ ಝರಿಗಳಿದ್ದಲ್ಲಿ ಗಿಡದ ಟೊಂಗೆಗಳನ್ನೂ, ಬೊಡ್ಡೆಗಳನ್ನೂ, ಒ ಗೆದು ಪೂಲು ಕಟ್ಟಿದರು. ಮೊದಮೊದಲು ಮನುಷ್ಯನ ತಲೆಯೆ ಭಾರವಾಹ ಕವೆನಿಸಿತು  ಬರಬರುತ್ತ ಎತ್ತು ಕತ್ತೆ ಮುಂತಾದ ಸಾಕಿದ ಪ್ರಾಣಿಗಳು ಭಾರ ವನ್ನು ಎಳೆಯುವದನ್ನು ಮತ್ತು ಹೊರುವದನ್ನು ಮಾಡಿದವು.

ಈ ರೀತಿಯಲ್ಲಿ ಮನುಷ್ಯನ ಚರಿತಾರ್ಥವು ಸಾಗಿರಲು ಗ್ರಾಮ ಜೀವನ ವು ಪ್ರಾರಂಭವಾಯಿತೆನ್ನಬಹುದು  ಗ್ರಾಮವನ್ನು ಹೊರಗಿನ ಶತ್ರುಗಳಿಂದ ರಕ್ಷಿಸಿಕೊಳ್ಳಲು ಊರ ಜನರೆಲ್ಲರೂ ಕೂಡಿ ಸಹಕಾರದಿಂದ ಹೋರಾಟ ನಡಿಸಿ ರಬಹುದು. ತತ್ಪರಿಣಾಮವಾಗಿ ನಾಯಕ, ಶಿಸ್ತು ಸಂಘಟನೆ ಶ್ರಮವಿಭಾಗ ಗಳ ಕಲ್ಪನೆಯು ಒದಗಿಬಂದಿರಬಹುದು. ಇವುಗಳನ್ನು ಗ್ರಾಮದ ಉಳಿದ ಸಂಗತಿಗಳಿಗೆ ಅಂದರೆ- ಒಕ್ಕಲಾದ ಆಡಳಿತಕ್ಕೆ ಹೊಂದಿಸಿದಾಗ " ಊರೊ ಟ್ಟಿನ " ಕೆಲಸದ ಕಲ್ಪನೆಯು ಬೆಳಕಿಗೆ ಬಂದಿತು. ಇಷ್ಟೊಂದು ಅವಧಿಯಲ್ಲಿ ಕಲ್ಲು ಮಣ್ಣುಗಳಂತೆ ಇತರ ಲೋಹಗಳ ಶೋಧವಾಗಿ ಅವುಗಳ ಬಳಿಕೆಯು ಹೆಚ್ಚಾಗಿ ಪ್ರಾರಂಭವಾಯಿತು. ಒಂದೊಂದು ಯುಗದಲ್ಲಿ ಶೋಧವಾದ

ಲೋಹಗಳಿಂದಲೇ ಆಗಿನ ಎಲ್ಲ ಶಸ್ತ್ರಾಸ್ತ್ರ ಪಾತ್ರೆ ಮುಂತಾದವುಗಳು ತಯಾರಾದದ್ದು ಕಂಡು ಬರುತ್ತದೆ. ದಿನಗಳು ಉರುಳುತ್ತಿರಲಾಗಿ ಮನುಷ್ಯನು ಶಿಲ್ಪ, ಚಿತ್ರಕಲೆ, ಗಾಯನ, ನರ್ತನ ಮುಂತಾದ ಲಲಿತ ಕಲೆಗಳನ್ನು ನಿಸರ್ಗದಿಂದಲೆ ಕಲಿತುಕೊಂಡು ಅವುಗಳಲ್ಲಿ ಪ್ರಾವೀಣ್ಯ ಪಡೆಯಲು ಹವಣಿಸಿದನು.

**ಪ್ರಶ್ನಾವಲಿ:—**

(೧) ಊರ ಹೆಸರುಗಳು ಹೇಗೆ ಕೊಡಲ್ಪಟ್ಟಿರಬಹುದೆಂಬುದನ್ನು ಬರೆದು ತೆಗೆಯಿರಿ.

(೨) ಡೋಣಿ ಅಥವಾ ನಾವೆಯ ಶೋಧವನ್ನು ಜನರು ಹೇಗೆ ಮಾಡಿರಬಹುದು ?

(೩) ಅಗ್ನಿಯನ್ನು ಹೊರಡಿಸಲಿಕ್ಕೆ ಎಂಥ ಕಟ್ಟಿಗೆಯ ತುಂಡುಗಳು ಬೇಕಾಗುವವೆಂಬವನ್ನು ಪರೀಕ್ಷ ಮಾಡಿರಿ.

(೪) ಗಣಿತ, ಭೂಮಿತಿ, ಮುಂತಾದ ವಿಷಯಗಳ ಜ್ಞಾನವು ಯಾವಾಗ ಪ್ರಾರಂಭವಾಯಿತು ?

## ೩. ನದೀ ತೀರದ ಸಂಸ್ಕೃತಿಗಳು.

ಇತಿಹಾಸವು, ಪ್ರಕೃತಿಯ ಮೇಲೆ ಮನುಷ್ಯನು ಮಾಡಿದ ಚಟುವಟಿಕೆಗಳೆಂದು ಹೇಳುತ್ತಾರೆ. ಭೂಗೋಲವು ಪ್ರಕೃತಿಯ ಮೇಲೆ ಪಂಚ ಮಹಾಭೂತಗಳ ಚಟುವಟಿಕೆಯೆನ್ನುವದೂ ನಿಜ. ಆದ್ದರಿಂದ ನಿಸರ್ಗವು ಎಲ್ಲೆಲ್ಲಿ ಅನುಕೂಲ ವಿರುವದೋ ಅಲ್ಲಲ್ಲಿ ಮನುಷ್ಯನ ಚಟುವಟಿಕೆಗಳು ಹೆಚ್ಚಾಗಿ ಇತಿಹಾಸವು ರೂಪಗೊಳ್ಳುವದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಮನುಷ್ಯನು ಒಕ್ಕಲತನವನ್ನು ಅವಲಂಬಿಸಿದ ಮೇಲೆ ನೀರು, ಹುಲ್ಲು-ಗಾವಲು ವಿಪರೀತವಾಗಿ ಬೇಕಾಗಹತ್ತಿದವು. ಈ ಕಾರಣದಿಂದ ಜಗತ್ತಿನ ಪ್ರಾಚೀನ ಸಂಸ್ಕೃತಿಗಳೆಲ್ಲ ಪ್ರಸಿದ್ಧ ನದಿಗಳ ದಂಡೆಗುಂಟ ಹಬ್ಬಿದವು. ಇಂಥ

ದೊಡ್ಡ ನದಿಗಳೆಂದರೆ ಸಿಂಧು, ಗಂಗಾ, ನೈಲ, ಯುಫ್ರೇಟೀಸ, ಹೋ-ಆಂಗ-ಹೋ. ಇವುಗಳನ್ನು ಒಂದೊಂದಾಗಿ ವಿವೇಚಿಸುವಾ.

**ನೈಲ ನದಿಯ ಸಂಸ್ಕೃತಿ:—** ನೈಲ ನದಿಯು ಉತ್ತರ ಆಫ್ರಿಕೆಯಲ್ಲಿ ಹರಿದು ಭೂಮಧ್ಯ ಸಮುದ್ರಕ್ಕೆ ಕೂಡಿಡೆಯಷ್ಟೆ ! ಈ ನದಿಯ ದಂಡೆಗುಂಟ ಇಂದಿಗೆ ಸುಮಾರು ಏಳುಸಾವಿರ ವರ್ಷಗಳ ಹಿಂದೆ ಅತ್ಯುನ್ನತವಾದ ಸಂಸ್ಕೃತಿಯು ನೆಲೆಸಿದ್ದಿತು. ಇಂದಿಗೂ ಅಲ್ಲಿ ಕಂಡು ಬರುವ ಅವಶೇಷಗಳು ತಮ್ಮ ಗತವೈಭವವನ್ನು ಎತ್ತಿ ತೋರಿಸುವವು. ಇಲ್ಲಿ ಆಳಿದ ಅರಸರ ಕಾಲಮಾನ ಮತ್ತು ವೃತ್ತಾಂತಗಳ ಪಟ್ಟಿಯು ಓದುಗರಿಗೆ ಸಂದೇಹಾಸ್ಪದವಾಗಿದ್ದರೂ ಅಜಮಾಸು ಕ್ರೈ. ಪೂ. ೪೦೦೦ ವರ್ಷಗಳ ಹಿಂದೆ ನೈಲ ನದಿಯ ಮುಖದ ಪ್ರದೇಶದಲ್ಲಿ ನೆಲಿಸಿದ ಅಸಭ್ಯ ಜನಾಂಗಗಳು ಒಂದು ಗೂಡಿ ಅರಸೊತ್ತಿಗೆಯು ಮೊದಲುಗೊಂಡಿತೆಂದು ಹೇಳಬಹುದು. ಇದಕ್ಕೆ 'ಮೇನಾ' ಎಂಬವನು ಮೊಟ್ಟ ಮೊದಲನೆಯ ಅರಸನೆಂದು ಹೇಳುವದುಂಟು. ಈ ನಂತರ ಇಜಿಪ್ತದಲ್ಲಿ ಆಳಿದ ಅರಸರಿಗೆ "ಪರೊಹ" ಎಂದು ಕರೆಯುವ ರೂಢಿ ಬಂತು. ಮೊದ ಮೊದಲಿನ ಮನೆತನಗಳು ಬಹು ಮಟ್ಟಿಗೆ ಹೆಸರಾಗಿವೆ. ಯಾಕಂದರೆ ಇವರು "ಪಿರಾಮಿಡ್" ಎಂಬ ಬೆಟ್ಟದಾಕೃತಿಯ ಅರಸರ ಗೋರಿಗಳನ್ನು ಕಟ್ಟಲು ಪ್ರಾರಂಭಿಸಿದರು. ಇಲ್ಲಿಯ ಅರಸರಲ್ಲಿ ಒಬ್ಬ ರಾಣಿಯೂ ಬಹು ಕಾಲ ರಾಜ್ಯಭಾರ ಮಾಡಿದ ಉದಾಹರಣೆ ಇದೆ.

ಪುರೋಹಿತ ಅಥವಾ ಉಪಾಧ್ಯಾಯ ಮಹಾಶಯನು ಇಜಿಪ್ತ ರಾಜ್ಯಭಾರದಲ್ಲಿ ಒಳ್ಳೆ ಆಯಕಟ್ಟಿನ ಸ್ಥಳವನ್ನು ಹಿಡಿದಿದ್ದನು. *ಇವನಿಗೆ ಅಸಂಖ್ಯ ಗುಲಾಮರಿದ್ದರು. ಭೂಮಿಯ ಬಹು ‡ಭಾಗವು ಇವನ ಒಡೆತನಕ್ಕೆ ಸೇರಿದ್ದಿತು. †ಗ್ರಾಮಗ್ರಾಮಗಳಿಂದ ಇವರಿಗೆ ಉತ್ಪನ್ನವು ಬಂದಿತು. ಇದಕ್ಕೆ ಅವನು ಕಿಂಚಿತ್ತಾದರೂ ಕರ ಕೊಡಬೇಕಾಗಿದ್ದಿಲ್ಲ. ಹೆಚ್ಚೇನು ! ಇಜಿಪ್ತದ ಜನರಲ್ಲಿ ಪುರೋಹಿತನು ದೇವರ ಪ್ರತಿನಿಧಿಯಂದು ಆದೇಕೆ !

---

*ಒಟ್ಟು ಜನಸಂಖ್ಯೆಯ ೧।೪೦ ರಷ್ಟು ಗುಲಾಮರು.

‡ಒಟ್ಟು ಭೂಮಿಯ ೧।೭ ರಷ್ಟು ಭೂಮಿಯು.

†ಒಟ್ಟಾರೆ ೧।೬ ಗ್ರಾಮಗಳು ಇನಾಮಾಗಿದ್ದವು.

ಪ್ರತ್ಯಕ್ಷ ದೇವರಂತೆ ಪೂಜೆಗೊಳ್ಳುತ್ತಿದ್ದನು. ಕ್ರಿ ಪೂ ೧೫೦೦ರ ಕಾಲಕ್ಕೆ ಇಜಿಪ್ತಿದ ಪೂರ್ವ ಪಶ್ಚಿಮದಿಂದ ದಾಳಿಗಳಾಗಿ ದೇಶವು ಹಾನಿಗೀಡಾಯಿತು. ಕ್ರಿ. ಪೂ ೪೮ ರಲ್ಲಿ ರೋಮ ರಾಜ್ಯದ ಸೀಝರ ಎಂಬ ರಾಜನು ಅಲೆಕ್‌ಝಾಂಡ್ರಿಯಕ್ಕೆ ಹೋಗಿ ಇಜಿಪ್ತದ ಮೇಲೆ ತನ್ನ ವರ್ಚಸ್ಸನ್ನು ಹಾಕಿದನು.

ಮನೆಗಳನ್ನು ಮಣ್ಣು ಕಟ್ಟಿಗೆಗಳಿಂದ ಕಟ್ಟಿಕೊಂಡು, ಊಟದಲ್ಲಿ ಮದಿರೆಯನ್ನು ಇವರು ಧಾರಾಳವಾಗಿ ಬಳಸಿದರು. ನೀರು ವಿಪುಲವಾಗಿ ಸಿಕ್ಕರೂ ಶಾಸ್ತ್ರಿಯ ಪದ್ಧತಿಯ ಒಕ್ಕಲತನವು ಇಲ್ಲದ್ದರಿಂದ ರೈತನು ಅಷ್ಟೊಂದು ಸುಖಿಯಾಗಿದ್ದಂತೆ ಕಾಣುವದಿಲ್ಲ. ಮುಖ್ಯವಾದ ಕೆಲವು ಲೋಹಗಳು ಇಜಿಪ್ತದ ಜನರಿಗೆ ಗೊತ್ತಿದ್ದವು. ಕೆತ್ತಿಗೆಯ ಕೆಲಸದಲ್ಲಿ ಅವರು ಒಳ್ಳೇ ಬಲ್ಲಿದವರಾಗಿದ್ದರು. ಕರವಸೂಲಿಯೂ ವ್ಯಾಪಾರವೂ ಬಹುತರ ಮಸ್ತು ವಿನಿಮಯದಿಂದಲೇ ನಡೆದಿತೆಂದು ತಿಳಿಯುತ್ತದೆ.

ಅರಸನೇ ಎಲ್ಲಕ್ಕೂ ಮೇಲಿನ ಅಧಿಕಾರಿಯು. ಅವನ ಆಜ್ಞೆಗಳನ್ನು ನಡಿಸುವವರು ಒಳ್ಳೆ ಅಭಿಮಾನ ತಾಳಿದರು. ನ್ಯಾಯದಾನವು ಒಳ್ಳೆ ಸುಲಭವಾಗಿದ್ದು, ಶಿಕ್ಷೆಗಳು ಮಾತ್ರ ಒಳ್ಳೆ ಕಠಿಣವಿದ್ದಂತೆ ತೋರುತ್ತದೆ. ರಾಜ್ಯದ ಮೂಲ ಘಟಕವು ಕುಟುಂಬವಾಗಿದ್ದು, ಅದು ಮಾತೃಸತ್ತಾಕವಿದ್ದಿತು. ಇಜಿಪ್ತದ ಜನರಿಗೆ ಭೂಮಿತಿಯು ಚನ್ನಾಗಿ ಗೊತ್ತಿದ್ದಂತೆ ತೋರುವದು. ಅವರು ನಿರ್ಮಿಸಿದ ಪ್ರಚಂಡ ಪಿರಾಮಿಡ್ಡುಗಳೇ ಇದಕ್ಕೆ ಸಾಕ್ಷಿ. *'ಪಾಯ್'ದ ತಿಳುವಳಿಕೆಯೂ ಅವರಿಗಿತ್ತು. ಇದರಂತೆ ಖಗೋಲವನ್ನೂ ಅವರು ಚೆನ್ನಾಗಿ ಅರಿತಿದ್ದರು. ಪಂಚಾಂಗವನ್ನು ಕಂಡು ಹಿಡಿದು ಅವರು ೧ ‡ವರ್ಷಕ್ಕೆ ೩೬೫ ದಿವಸಗಳನ್ನು ಎಣಿಸಿದರು. † ಅಂಕಗಣಿತವೂ ಇವರಿಗೆ ಪರಿಚಿತವಿದ್ದಿತು.

ಹಿಂದೂ ಜನರು ವಿಶ್ವದ ಕಲ್ಪನೆಯನ್ನು ಮಾಡಿಕೊಂಡಂತೆ ಇಜಿಪ್ತದವ

---

*π=೩.೧೬ ಎಂದು ಇಜಿಪ್ತದವರು ತಿಳಿದರು. ನೋಡು ಇತರ ಜಗಾಚಾ ಇತಿಹಾಸ

‡ಇಜಿಪ್ತದ ತಿಂಗಳಿಗೆ ೩೦ ದಿವಸ ಮಾತ್ರ. ವರ್ಷದ ಕೊನೆಗೆ ೫ ದಿವಸಗಳನ್ನು ದೇವರಿಗೆ ದೇಣಿಗೆಯೆಂದು ನಂಬಿದ್ದರು

†ಇಜಿಪ್ತದ ಅಂಕಿಗಳು:— ೧=೧೦, ೧=೧೦೦, ‡=೧೦೦೦, 7=೧೦,೦೦೦

ರೂ ತಮ್ಮದೊಂದು ಕಲ್ಪನೆಯನ್ನು ಮಾಡಿಕೊಂಡಿದ್ದರು ಇದೊಂದು ಪೆಟ್ಟಿಗೆಯಂತಿದ್ದು, ಅದರಂಚಿನಲ್ಲಿ ನೀರು ತುಂಬಿದೆ ಇದರಲ್ಲಿ ಒಂದು ಡೋಣಿಯು ತೇಲುತ್ತದೆ. ಅದರಲ್ಲಿ ಸೂರ್ಯನು ಪ್ರವಾಸ ಮಾಡುತ್ತಿದ್ದು ನಮಗೆ ಹಗಲು ರಾತ್ರಿಗಳನ್ನು ಕೊಡುತ್ತಾನೆ. ಆಕಾಶವೆಂಬ ಪೊಳ್ಳಿನಲ್ಲಿ ಒಂದು ಆಕಳು ನಿಂತಿದ್ದು, ಅದನ್ನು ರಕ್ಷಿಸಲು ಒಬ್ಬ ದೇವದೂತನಿದ್ದಾನೆ. ಇದಲ್ಲದೆ, ಸೂರ್ಯ ಪೂಜೆಯೂ ಇವರಲ್ಲಿ ಹೆಚ್ಚಾಗಿ ನಡೆಯಿತು ವನಸ್ಪತಿ ಪೂಜೆ, ಪಶು ಪೂಜೆಗಳೂ ಧಾರಾಳವಾಗಿ ನಡೆದವು. ಸದಾಚಾರವೇ ಧರ್ಮದ ತಿರುಳೆಂಬ ತಿಳುವಳಿಕೆಯೂ ಪ್ರಚಾರದಲ್ಲಿದ್ದಿತು. ದೇವತೆಗಳ ಕ್ರೂರತನವನ್ನು ತಪ್ಪಿಸುವ ಮಂತ್ರ ತಂತ್ರಗಳನ್ನು ಪುರೋಹಿತನು ಬಲ್ಲವನಾಗಿದ್ದನು.

**ಟೈಗ್ರೀಸ ಮತ್ತು ಯುಫ್ರೆಟಿಸ ನದೀ ತೀರಗಳು:—** ಪಶ್ಚಿಮ ಏಶಿಯನಲ್ಲಿ ಇರಾಣ ಆಖಾತದ ಮುಖ್ಯ ನದಿಗಳಾದ ಟೈಗ್ರೀಸ ಮತ್ತು ಯುಫ್ರೆಟಿಸ ಎಂಬ ನದಿಗಳು ಪುರಾತನ ಕಾಲದಿಂದ ಉಚ್ಚ ಸಂಸ್ಕೃತಿ, ಸಾಮ್ರಾಜ್ಯದ ಉಗಮಸ್ಥಾನವೆಂದು ಹೆಸರಾಗಿವೆ. ಹೊರಗಿನ ಸಂಸ್ಕೃತಿಗಳು ಇಲ್ಲಿಗೆ ಬಂದು ನೆಲೆಸಿದುದೂ ಉಂಟು ಇಲ್ಲಿಂದ ಸಂಸ್ಕೃತಿಗಳು ಹೊರಗೆ ಸಾಗಿ ಹೋದದ್ದೂ ಉಂಟು. ಈ ಸ್ಥಾನದಲ್ಲಿ ಒಟ್ಟು ಮೂರು ಸಂಸ್ಕೃತಿಗಳು ತಲೆಯೆತ್ತಿ, ಮೆರೆದು ಕಣ್ಮರೆಯಾದವೆಂದು ಪಂಡಿತರು ಹೇಳುವದುಂಟು. ಅವೆಂದರೆ —

(೧) ಸುಮೇರಿಯನ್ ಸಂಸ್ಕೃತಿ
(೨) ಬಾಬಿಲೋನ ರಾಜ್ಯ
(೩) ಆಸಿರಿಯನ್ ಸಂಸ್ಕೃತಿ

**ಸುಮೆರಿಯನ್ ಸಂಸ್ಕೃತಿ:—**

*ಸುಮೆರಿ ಜನರು ಎಲ್ಲಿಂದ ಬಂದರೆಂದು ಹೇಳಲು ಬರುವಂತಿಲ್ಲ. ಇವರು ಯುಫ್ರೆಟಿಸ್ ಟೈಗ್ರಿಸ್ ನದಿಗಳ ಮುಖದ ಹತ್ತಿರ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿಕೊಂಡು ಮೇಲಾದ ಸಂಸ್ಕೃತಿಯನ್ನು ಬೆಳೆಸಿದರು. ಬರಬರುತ್ತ ಯುಫ್ರೆಟಿಸ್ ನದಿಯ ದಂಡೆಗುಂಟ ಹರಿಬಿದ್ದರು. ನದಿಗೆ ಮಹಾಪೂರ ಬಂದಾಗ ಕಾಲುವೆಗಳಿಂದ ನೀರನ್ನು ಪೂರೈಸಿ ಹೊಲಗಳಲ್ಲಿ ಗೋದಿ ಜವೆ

*ಸುಮೇರಿ ಸಂಸ್ಕೃತಿಯು ಕ್ರಿ. ಪೂ. ೩೫೦೦ ರಿಂದ ಪ್ರಾರಂಭವಾಯಿತು.

ಗೋಧಿಗಳನ್ನು ಬೆಳೆದರು. ನದಿ ತೀರದ ಹುಲ್ಲುಗಾವಲುಗಳಲ್ಲಿ ದನಕರ ಮತ್ತು ಕುರಿಯ ಹಿಂಡುಗಳನ್ನು ಮೇಯಿಸಿ, ನದಿಯ ಮುಖಾಂತರ ಪರದೇಶದ ವ್ಯಾಪಾರಗಳನ್ನು ಬೆಳೆಸಿದರು. ಕಂಚು, ತಾಮ್ರಗಳಿಂದ ಪಾತ್ರೆಗಳನ್ನೂ ಆಯುಧಗಳನ್ನೂ ಮಾಡಿಕೊಂಡರು ವ್ಯಾಪಾರವನ್ನು ವಸ್ತು ವಿನಿಮಯದಿಂದಲೇ ಸಾಗಿಸಿದರು ಒಮ್ಮೊಮ್ಮೆ, ಬೆಳ್ಳಿ ಬಂಗಾರಗಳನ್ನು ನಾಣ್ಯದಂತೆ ಉಪಯೋಗಿಸಿದರು.

ಸುಮೇರಿ ಜನರಲ್ಲಿ ರಾಜಸತ್ತೆ ಮತ್ತು ಧರ್ಮಸತ್ತೆಗಳು ಒಬ್ಬನ ಕೈಯಲ್ಲಿಯೆ ಇರುತ್ತಿದ್ದವು. ಇವರಲ್ಲಿ "ಪುರೋಹಿತನೆ" ಶ್ರೇಷ್ಠನೆಂದನಿಸಿದನು. ಇವನು ಒಂದು ವಿಶಿಷ್ಟಪ್ರಕಾರದ†ಗುಡಿಗಳನ್ನು ಕಟ್ಟಿಕೊಂಡು ಅದರ ಪ್ರಾಕಾರದಲ್ಲಿ ವಾಸಿಸುತ್ತಿದ್ದನು ಸುಮೆರಿಯನರು ಯುದ್ಧದಲ್ಲಿ ಒಡಿದ ವೈರಿಗಳನ್ನು ಗುಲಾಮರಂತೆ ಮಾರುತ್ತಿದ್ದರು ಒಮ್ಮೊಮ್ಮೆ ಅವರನ್ನೆಲ್ಲ ಕೊಂದು ಒಗೆದದ್ದೂ ಉಂಟು. ಹೆಂಡತಿಯು ಗಂಡನ ಸೊತ್ತೆಂದು ಎನಿಸಿದಳು. ವಿಶೇಷ ಪ್ರಸಂಗ ಒದಗಿದಲ್ಲಿ ಗಂಡನು ಹೆಂಡತಿಯನ್ನು ಮಾರಿಬಿಡಬಹುದಿತ್ತು. ದಕ್ಷಿಣದಿಂದ ಒತ್ತಿ ಬರುವ ಎಲ್ಮಾಯಿಟ ಎಂಬ ಜನಾಂಗವು ಇವರನ್ನು ಕೊನೆಗೆ ಮುರಿಬಡಿಯಿತು.

**ಬಾಬಿಲೋನಿಯನ್ ರಾಜ್ಯ:**—ಕ್ರಿ ಪೂ. ೨೨೦೦ ರ ಸುಮಾರಕ್ಕೆ ಸಿರಿಯಾದಿಂದ ಪಂಗಡವೊಂದು ಹೊರಹೊರಟು ಬಾಬಿಲೋನ್ ಎಂಬ ಗ್ರಾಮದಲ್ಲಿ ಸ್ಥಿರವಾಗಿ ನಿಂತಿತು. ಇದೇ ಸುಮಾರಕ್ಕೆ ಆಗಿ ಹೋದ ಇಲ್ಲಿಯ ಹಮ್ಮುರಾಬಿ ಎಂಬ ರಾಜನು ಬಹಳ ಹೆಸರುವಾಸಿಯಾದನು. ದಿನಗಳು ಕಳೆಯಲಾಗಿ ಈ ಜನರು ಊರ್ ಎಂಬ ನಗರವನ್ನು ಮುತ್ತಿ ಅಲ್ಲಿಯ ಎಲ್ಮಾಯಿಟ ಜನರನ್ನು ಕಾಡಿಗಟ್ಟಿ ಬಿಟ್ಟರು. ಈ ತೆರನಾಗಿ ಪಸರಿಸುತ್ತ ಕೊನೆಗೆ ಸಿರಿಯಾವನ್ನೆ ಕೈವಶ ಮಾಡಿಕೊಂಡರು. ಈ ಅರಸರು ದೊಡ್ಡ ದೇವಾಲಯಗಳನ್ನು ಕಟ್ಟಿಸಿ ಒಳ್ಳೆ ವೈಭವದಿಂದ ಕಾಲ ಕಳೆದರು. ಕಾಲವು ಗತಿಸಿದಂತೆ ಇವರಲ್ಲಿ ಭೋಗಲಾಲಸೆಯು ಬೆಳೆದದ್ದರಿಂದ ಇದೇ ವೇಳೆಗೆ ಸೆಮಾಯಿಟ ಜನರಲ್ಲಿಯ ಕಸಾಯಿಟ್ ಎಂಬ ಜನರು ಒತ್ತಿ ಬಂದದ್ದರಿಂದ ಮುಂದಿನ ೧೫೦

† "ಝಿಗುಟರ" ಎಂಬ ಗುಡಿಗಳು.

ವರ್ಷಗಳ ವರೆಗೆ ಬಾಬಿಲೋನವು ಇವರ ಕೈಯಲ್ಲಿ ಉಳಿಯಿತು. ಬಾಬಿಲೋನದ ಜನರಿಗೆ ಅಂಕಗಣಿತ ಭೂಮಿತಿಗಳು ಗೊತ್ತಿದ್ದವು

ಅಸೀರಿಯನ್ ಸಂಸ್ಕೃತಿ.—ಮೊದಲಿಗೆ ಟೈಗ್ರಿಸ ನದಿಯ ದಂಡೆಗುಂಟೆ ಈ ಜನಾಂಗದವರು ಹಬ್ಬಿದರು. ಪಟ್ಟಣಕ್ಕೊಬ್ಬ ರಾಜನಾಗಿ ಬೆಳೆದು ತಮ್ಮ ಶೂರತನವನ್ನು ತೋರಿದರು. ಬರಬರುತ್ತ, ಕಸಾಯಿಟೆ ಜನರು ಬಾಬಿಲೋನದ ಮೇಲೆ ದಾಳಿ ಮಾಡಿದಾಗ ಪ್ರಸಂಗ ನೋಡಿ ತಮ್ಮ ಸತ್ತೆಯನ್ನು ಅದರ ಮೇಲೆ ಹೇರಿದರು ಆ ನಂತರ ಅನೇಕ ರಾಜರಾಗಿ ಹೋಗಿ, ಕೆಲವರು ತಮ್ಮ ಅಧಿಕಾರ, ರಾಜ್ಯಗಳನ್ನು ಬಹು ದೂರದ ವರೆಗೆ ಹಬ್ಬಿಸಿದರು. ಪಾಲಿಸ್ತಾನ, ಸಾಯಪ್ರಸ್ ಮತ್ತು ಗ್ರೀಕ ರಾಜ್ಯದ ವರೆಗೆ ಇವರ ಸತ್ತೆಯು ಹಬ್ಬಿತು. ಕಾಲ ಕಳೆಯುತ್ತಿರಲಾಗಿ, ಸುತ್ತಲಿನ ಕಾಡು ಜನಾಂಗಗಳು ನುಗ್ಗಿ ಬಂದು ಅಸಿರಿಯನ್ ಸಂಸ್ಕೃತಿಯನ್ನು ಮಣ್ಣು ಗೂಡಿಸಿದವು

ಈ ಜನರಿಗೆ *ಕಬ್ಬಿಣದ ಉಪಯೋಗವು ಚನ್ನಾಗಿ ಗೊತ್ತಿತ್ತು. ಇವರು ಕೃಷಿಪ್ರಧಾನಜೀವಿಗಳಾಗಿದ್ದರು ಟೈಗ್ರಿಸ ನದಿಯುಗುಂಟ ತರತರದ ಧಾನ್ಯ† ಮತ್ತು ಹಣ್ಣುಗಳನ್ನು ಬೆಳೆದರು. ಇವರ ಕಾಚಿನ ಸಾಮಾನುಗಳು ಮತ್ತು ಒಣ್ಣದ ಸಾಮಾನುಗಳು ಒಳ್ಳೆ ಉತ್ತಮತರಗತಿಯುವಾಗಿದ್ದವು. ಸೀಸು, ತಾಮ್ರ ಮತ್ತು ಬಂಗಾರದ ನಾಣ್ಯಗಳನ್ನು ಮಾಡಿ ವ್ಯಾಪಾರ ಸಾಗಿಸಿದರು. ಅಸಿರಿಯನ್ ಜನರಲ್ಲಿ ಸರದಾರರು, ವ್ಯಾಪಾರಿಗಳು, ಒಕ್ಕಲಿಗರು, ಜೀವಿತ ಆಳುಗಳು, ಮನೆಗೆಲಸದ ಗುಲಾಮರೆಂಬ ಭಾಗಗಳಿದ್ದವು. ಸ್ತ್ರೀಯರು ಬಹುತರ ಗಂಡಂದಿರ ಸೊತ್ತಾಗಿದ್ದರು. ಇವರ ಮೇಲೆ ನಿರ್ಬಂಧಗಳಿದ್ದವು. ಅಸಿರಿಯನ್ನರಿಗೆ ವೈದ್ಯಕಿ, ಜ್ಯೋತಿಷ್ಯ, ವನಸ್ಪತಿಶಾಸ್ತ್ರ, ಯುದ್ಧ-ಶಾಸ್ತ್ರಗಳು ತಿಳಿದಿದ್ದವು.

---

*ಯುದ್ಧದಲ್ಲಿ ಬಿಲ್ಲು, ಬಾಣ, ರಥ, ಚಕ್ರಗಳು ಕಬ್ಬಿಣದಿಂದ ತಯಾರಾಗುತ್ತಿದ್ದವು.

†ಎಳ್ಳು, ಜವೆಗೋದಿ, ಸೀರುಳ್ಳಿ, ಬಳ್ಳೊಳ್ಳಿ, ದ್ರಾಕ್ಷೆ, ಔಡಲ, ಮಾಲಿಂಗಿ, ಸವತಿಕಾಯಿ ಮುಂತಾದವುಗಳನ್ನು ಬೆಳೆಸಿದರು.

**ಸಿಂಧು ನದೀ ತೀರದ ಸಂಸ್ಕೃತಿ:—**

ಇತ್ತೀಚೆಗೆ ಪ್ರಾಕ್ತನ ಪರೀಕ್ಷೆಯಲ್ಲಿ ಆಶ್ಚರ್ಯಕರವಾದ ಸಂಗತಿಗಳು ಕಂಡುಬಂದಿವೆ. ಪಂಜಾಬ ಪ್ರಾಂತದ ಮಾಂಟಗಮರಿ ಜಿಲ್ಹೆಯ ರಾವಿ ನದಿಯ ತಟಪ್ರದೇಶದಲ್ಲಿ ಹರಪ್ಪಾ ಎಂಬೆಡೆಯಲ್ಲಿಯೂ, ಸಿಂಧ ಪ್ರಾಂತದ ಲಾರ್ಖಾನಾ ಜಿಲ್ಹೆಯಲ್ಲಿ ಮೊಹೆಂಜೊದಾರೊ ಎಂಬಲ್ಲಿಯೂ ಭೂಗತ ಪುರಾ-ತನ ನಗರಗಳು ಪ್ರಕಾಶಕ್ಕೆ ಬಂದಿವೆ.

ಇಲ್ಲಿಯ ಅವಶೇಷಗಳು ಬಹು ಪುರಾತನ ಕಾಲದವೆಂದು ಹೇಳ ಲಾಗುತ್ತದೆ ಈ ಪಟ್ಟಣಗಳಲ್ಲಿ ವಾಸಿಸಿದ ಜನರು ಬೇರೆಬೇರೆ ಪಂಗಡಗಳಿಗೆ ಸೇರಿದವರೆಂದು ತಿಳಿದು ಬರುತ್ತದೆ. ಸಮಾಜಜೀವನವು ಸುಗಮವಾಗ ಲೆಂದು ವ್ಯಾಪಾರಿಗಳು ಮತ್ತು ಒಕ್ಕಲಿಗರು ಎಂದು ವಿಂಗಡಿಸಿರಬಹುದು. ಇಲ್ಲಿ, ಸುಟ್ಟ ಇಟ್ಟಿಗೆಗಳಿಂದ ನಿರ್ಮಿತವಾದ ಮನೆ-ಮಂದಿರ-ದೇವಾಲಯ ಗಳೂ, ಆಶ್ಚರ್ಯಕಾರಕ ಚರಂಡಿಗಳ ಏರ್ಪಾಡೂ, ತಾಮ್ರ, ಸೀಸು, ಬೆಳ್ಳಿ, ಚಿನ್ನ, ಕಲ್ಲು, ಇವುಗಳ ವಸ್ತುಗಳೂ, ಅಲಂಕಾರಯುಕ್ತವಾದ ಆಟದ ಸಾಮಾನುಗಳೂ, ಆಭರಣಗಳೂ, ಯಾವದೋ ಚಿತ್ರಲಿಪಿಯುಳ್ಳ ಮುದ್ರೆಯೂ ಕಂಡುಬಂದಿವೆ. ಈ ನಗರಗಳಲ್ಲಿದ್ದ ಘನವಾದ ನಾಗರಿಕತೆಯು ಹೆಜ್ಜೆ ಹೆಜ್ಜೆಗೂ, ಪ್ರತಿಯೊಂದು ವಸ್ತುವಿನಲ್ಲಿಯೂ ಕಂಡುಬರುತ್ತದೆ. ಇದು ಕ್ರಿ ಪೂ. ೩೦೦೦ ವರ್ಷಗಳ ಹಿಂದಿನ ನಾಗರಿಕತೆ ಎಂದು ಬಲ್ಲವರು ಹೇಳು ವರು. ಬಹುತರವಾಗಿ ಇದು ಶಿಲಾಯುಗ—ಲೋಹಯುಗಗಳ ಮಧ್ಯಂತರ ಕಾಲವಿರಬಹುದೆಂದು ಊಹೆಯಿದೆ. ಇವರು ಹತ್ತಿಯ ವಸನಗಳನ್ನುಟ್ಟು, ಆಹಾರಕ್ಕಾಗಿ ಗೋದಿ, ಜವೆಗೋದಿಗಳನ್ನು ಬಳಸಿದರು. ನಗರ ನಿರ್ಮಾಣ, ಬೀದಿಯ ಇಕ್ಕೆಲದ ಕಾಲುವೆಗಳು, ಸ್ನಾನಗೃಹಗಳು, ಬಾವಿಗಳು ಮೊದಲಾ-ದವುಗಳಿಂದ ಇವರ ನಾಗರಿಕತೆಯು ಉಚ್ಚತರವಾದದ್ದೆಂದು ಕಂಡುಬಂದಿದೆ. ಇವರಿಗೆ ನಾಣ್ಯದ ಬಳಿಕೆ ಗೊತ್ತಿತ್ತು. ನದಿಗಳಿಗೆ ಆಣೆಕಟ್ಟು ಕಟ್ಟುವ ಕ್ರಮ ಗೊತ್ತಿತ್ತು. ಇವರು ಪಾತ್ರೆಗಳ ನಿರ್ಮಾಣದಲ್ಲಿ ಬಣ್ಣಗಳನ್ನು ಉಪಯೋ-ಗಿಸಿ ಸೊಬಗನ್ನು ಪಡೆದರು. ಹೆಣಗಳನ್ನು ಒಂದು ತರದ ಮಣ್ಣಿನ ಪೆಟ್ಟಿಗೆ ಯಲ್ಲಿ ಹುಗಿಯುತ್ತಿದ್ದರು. ಈ ಜನರು ಕೆಲವು ರೀತಿಗಳಿಂದ ಧರ್ಮಿಷ್ಠರಿದ್ದ-

ರೆಂದು ಕಂಡುಬಂದಿದೆ. ಇವರು ಶಕ್ತಿ, ಲಿಂಗ, ವೃಷಭ, ಮತ್ತು ಮೂರು ತಲೆಯುಳ್ಳ ದೇವರೊಂದನ್ನು ಪೂಜಿಸುತ್ತಿದ್ದರು.

ಈ ಸಂಸ್ಕೃತಿಯು ಮೆಸೊಪೊಟೇಮಿಯಾ, ಇಲ್ಯಾಮುಗಳ ಸಂಸ್ಕೃತಿಗಳಿಗೆ ಸಮಕಾಲೀನವಾದದ್ದೆಂದು ಕಂಡುಬಂದಿದೆ.

**ಗಂಗಾ ನದೀ ತೀರದ ಸಂಸ್ಕೃತಿ:-**



ಗಂಗಾ ನದೀ ತೀರದ ಮೇಲಿರುವ ಒಂದು ತಪೋವನದ ನೋಟ.

ಸಾಮಾನ್ಯ ನಕ್ಷೆಯಲ್ಲಿ ಇಂದು ನಾವು ಉತ್ತರ ಭಾರತವೆಂದು ಕರೆಯುವ ಭೂಭಾಗವು ಇರಲಿಲ್ಲವೆಂದು ಹೇಳಿಕೆಯಿದೆ. ಅಲ್ಲಿಯ ಮಣ್ಣನ್ನೂ ಭೂರಚನೆಯನ್ನೂ ಪರೀಶೀಲಿಸಿ ನೋಡಿದರೆ ; ಇಡೀ ಉತ್ತರ ಹಿಂದುಸ್ಥಾನವೆಂಬ ಪ್ರದೇಶವೆಲ್ಲ ರೇವೆ ಮಣ್ಣಿನಿಂದ ತಯಾರಾದ ಭೂಮಿಯೆಂದು ತಿಳಿದುಬರುತ್ತದೆ. ಈ ಭಾಗದಲ್ಲಿ ಹರಿಯುವ ಗಂಗಾ ಮತ್ತು ಯಮುನಾ ನದಿಗಳೂ ಅವುಗಳ ಅಸಂಖ್ಯ ಉಪನದಿಗಳೂ ಈ ಭೂಮಿಯನ್ನು ಕ್ರಮಶಃ ತಯಾರು ಮಾಡಿದವೆಂದು ನಂಬಲಾಗಿದೆ. ಒಟ್ಟಾರೆ, ಉತ್ತರ ಹಿಂದುಸ್ಥಾನದ ಹಳ್ಳಿ ಮತ್ತು

ಪಟ್ಟಣ ವಾಸಿಗಳು ಈ ನದಿಯು ಕೊಡುವ ಅನಂತ ಉಪಕಾರಗಳನ್ನು ಲಕ್ಷಿಸಿ ಇಲ್ಲಿ ನೆಲೆಸಿ ಪಸರಿಸತೊಡಗಿದರು ಗಂಗಾ ನದಿಯ ಎಡಬಲದ ದಂಡೆಗಳ ಮೇಲೆ ಇದ್ದ ಎಷ್ಟೋ ಸ್ಥಳಗಳನ್ನು ಆರ್ಯರು ತಮ್ಮ ಯಜ್ಞಯಾಗಾದಿಗಳಿಗೆ ಉಪಯುಕ್ತವಾದ ಸ್ಥಳಗಳೆಂದು ನಂಬಿದರು

ಆರ್ಯರು ಭಾರತಕ್ಕೆ ಬಂದು ನೆಲೆಸಿದಂದಿನಿಂದ ಕ್ರಮಶಃ ಉತ್ತರ ಹಿಂದುಸ್ತಾನವನ್ನೆಲ್ಲ ಆಕ್ರಮಿಸಿದರು ನಂತರ ದಕ್ಷಿಣಾಪಥಕ್ಕೆ ಹೊರಳಿದ-ರೆಂದು ಹೇಳಿಕೆಯದೆ ಬರಬರುತ್ತ ಇಡಿ ಭಾರತದ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ಆರ್ಯ ಸಂಸ್ಕೃತಿಯು ವ್ಯಾಪಿಸಿತೆಂದು ಧಾರಾಳವಾಗಿ ಹೇಳಬಹುದು ಪಂಜಾಬದ ನದಿ ಪ್ರದೇಶಗಳನ್ನು ದಾಟಿ ಮುಂದೆ ಸರಿದ ಆರ್ಯರು ಬ್ರಹ್ಮಾವರ್ತವನ್ನು ನಿರ್ಮಿಸಿದರು ಉತ್ತರ ಭಾರತದ ಇತರ ಜನಾಂಗಗಳನ್ನು ಎದುರಿಸಿ, ಪ್ರತಿಭಟಿಸುವಕಾರ್ಯಕ್ಕಾಗಿ ಇವನ್ನು ಎರಡನೆಯ ಮೆಟ್ಟಲಿನಂತೆ ಉಪಯೋಗಿಸಲಾಯಿತು ಕಾಲಗತಿಯಲ್ಲಿ ಇವರು ನದಿಯ ದಂಡೆಗಳಗುಂಟ ಪಸರಿಸಿದರು ಸಂಗಡ ತಮ್ಮ ಗೋ ಧನ ಮತ್ತು ತಮ್ಮ ಸಂಸ್ಕೃತಿಯ ಇತರ ಲಕ್ಷಣಗಳನ್ನೆಲ್ಲ ಕರಮುಕೊಂಡು ಸಾಗಿದರು ಆರ್ಯಾವರ್ತವು ಇವರ ನೆಲೆಯಾಯಿತು ಪಂಚನದ ಪ್ರಾಂತದಲ್ಲಿ ಇದ್ದಾಗಲೇ ಆರ್ಯರು ವೇದಗಳನ್ನು ರಚಿಸಿದರು. ತಮ್ಮ ದೇವತೆಗಳ ಪ್ರೀತ್ಯರ್ಥವಾಗಿ ರಚಿಸಿದ ಪ್ರಾರ್ಥನೆಗಳೇ ವೇದಗಳ ಮಂತ್ರಗಳೆನಿಸಿದವು ಈ ಕಾಲದಲ್ಲಿ ಆರ್ಯರು ಯಜ್ಞಗಳಲ್ಲಿ ನಂಬಿಗೆಯಿಟ್ಟು ಅವುಗಳನ್ನು ಒಳ್ಳೇ ವಿಜೃಂಭಣೆಯಿಂದ ಸಾಗಿಸಿದರು. ಆದರೆ, ಯಜ್ಞಗಳಲ್ಲಿ ನಡೆಯುವ ಪ್ರಾಣಿವಧೆಯು ಭೀಕರ ದೃಶ್ಯವು ಇವರಲ್ಲಿ ಮರುಕವನ್ನು ಹುಟ್ಟಿಸಿತು ಮತ್ತು ತಮ್ಮ ಇಷ್ಟಾರ್ಥ ಸಿದ್ಧಿಸದಿದ್ದಾಗ ಯಜ್ಞಯಾಗಾದಿಗಳ ಹೊರತಾಗಿ, ಜಗದ ಚೈತನ್ಯ ಸ್ವರೂಪದಲ್ಲಿಯೆ ಒಂದು ಶಕ್ತಿ ಇದ್ದು ಅದುವೇ ಮನುಷ್ಯನ ತಾಪ ನಿವಾರಣೆಗೆ ಸಮರ್ಥವಾದುದೆಂದು ನಂಬಿದರು. ಇಂತಹ ಪರಬ್ರಹ್ಮನ ಸ್ವರೂಪವನ್ನು ತಿಳಿಯಲು ಸರ್ವ ಸಂಗ ಪರಿತ್ಯಾಗ ಮಾಡಿ ಗಿರಿ ಗಹ್ವರದೊಳಗೆ ಕುಳಿತು ತಪವ ನಡಿಸಿದರು. ಇದು ಉಪನಿಷತ್ ಕಾಲವೆಂದು ಹೆಸರಾಗಿದೆ ಒಂದು ರೀತಿಯಲ್ಲಿ ವೇದೋಕ್ತ ಯಜ್ಞ ಯಾಗಾದಿಗಳಿಗೆ ಉಪನಿಷತ್ತುಗಳು ವಿರೋಧ ತಳೆದು

ಕ್ರಾಂತಿ ಹೂಡಿದವೆಂದು ಹೇಳಬಹುದು.

ಪ್ರಕೃತಿಯ ವಿವಿಧ ಅನುಕೂಲತೆಗಳ—ಮಳೆ, ಬೆಳೆ, ಹವೆ, — ಸವಿಯೂಟವನ್ನುಣ್ಣುತ್ತ, ವರ್ಣಾಶ್ರಮ ಧರ್ಮಗಳಿಂದ ಕೂಡಿದ ಆರ್ಯ ಸಮಾಜವು ಗಂಗಾ ನದಿಯ ದಂಡೆಗುಂಟ ಪಸರಿಸಿ, ಪವಿತ್ರ ಯಾತ್ರಾ ಸ್ಥಳಗಳನ್ನೂ, ದೊಡ್ಡ ಪಟ್ಟಣಗಳನ್ನೂ ಈ ನದಿಯ ನೆರೆಹೊರೆಯಲ್ಲಿಯೆ ಕಲ್ಪಿಸಿಕೊಂಡಿತು. ರಾಜರೂ ಪ್ರಜಾಹಿತರತರಾಗಿ ತಮ್ಮದೇ ಆದ ಒಂದು ಧರ್ಮವನ್ನು ಕಲ್ಪಿಸಿ, ಅದರಂತೆ ರಾಜ್ಯಭಾರ ಸಾಗಿಸಿ ಕೃತಕೃತ್ಯರಾದರು ರಘು, ದಿಲೀಪ, ದಶರಥ, ರಾಮಚಂದ್ರ ಸಂತಹರು ರಾಜರ್ಷಿಗಳೆಂಬ ಹೆಸರಿಗೆ ಯೋಗ್ಯರಾದರು. ಇಂದಿನ ಭಾರತದಲ್ಲ ವಾಸಿಸುವ ಆರ್ಯವಂಶೀಯರಾದ ಹಿಂದುಗಳು, ಮೇಲೆ ಹೇಳಿದ ಆರ್ಯರ ಆಚಾರವಿಚಾರಗಳನ್ನು ಅನುಸರಿಸಲು ಪ್ರಯತ್ನಿಸುವದೇನಾಶ್ಚರ್ಯ ? ಇಂದಿಗೂ ಗಂಗಾನದೀ ತೀರ ಪ್ರದೇಶದಲ್ಲಿ ಆರ್ಯರ ಸಂಸ್ಕೃತಿ ಪ್ರಸಾರದ ಹೆಗ್ಗುರುತುಗಳು ಸ್ಪಷ್ಟವಾಗಿ ಕಂಗೊಳಿಸುವವು ಅದೇಕೆ! ಭಾರತೀಯ ಸಂಸ್ಕೃತಿಯು ರೂಪಗೊಂಡದ್ದು ಗಂಗಾನದಿಯ ತೀರದಲ್ಲಿಯೆ ಎಂದು ಹೇಳಿದರ ತಪ್ಪಾಗಲಿಕ್ಕಿಲ್ಲ ಆರ್ಯ ಜೀವನದ ಮೂಲ ಮಾತಾದ ತಪೋವನ, ಆಶ್ರಮಗಳು ಗಂಗಾನದಿಯ ದಂಡೆಗುಂಟ ಎಷ್ಟೋ ಕಣ್ಣಿಗೆ ಬೀಳುವವು. ಬರಬರುತ್ತ ಭಾರತದ ಮೂಲ ನಿವಾಸಿಗಳ ಕೂಡ ಆರ್ಯರು ಬೆರೆತು ಸಮರಸರಾದರು.

**ಹೊ-ಆಂಗ-ಹೊ ನದೀ ತೀರದ ಸಂಸ್ಕೃತಿ:—**

ಚೀನ ದೇಶವು ಭಾರತದ ಉತ್ತರಕ್ಕೆ ವಿಸ್ತಾರವಾಗಿ ನೆಲೆಸಿದೆಯಷ್ಟೆ ? ಇದಾದರೂ ಪುರಾತನ ಕಾಲದಿಂದ ಮೇಲಾದ ಸಭ್ಯತೆಯನ್ನು ಪಡೆದ ದೇಶವೆಂದು ಹೆಸರಾಗಿದೆ. ಚೀನದ ತುಸು ದಕ್ಷಿಣದಲ್ಲಿದ್ದ ಹೊ-ಆಂಗ-ಹೊ ಮತ್ತು ಯಾಂಗತ್ಸಿಕಾಂಗ ನದಿಗಳ ಮೈದಾನವೇ ಈ ಸಂಸ್ಕೃತಿಯ ಉಗಮಸ್ಥಾನವು. ಚೀನೀ ಜನರು ಮೊದಲಿನಿಂದಲೂ ಒಕ್ಕಲತನಕ್ಕೆ ಅಂಟಿಕೊಂಡದ್ದರಿಂದ ಮೇಲೆಹೇಳಿದ ನದಿಗಳ ಬಯಲನ್ನೇ ತಮ್ಮ ನಿವಾಸಸ್ಥಾನಕ್ಕಾಗಿ ಆರಿಸಿದರು. ಮೊದಮೊದಲು ಅಲ್ಲಲ್ಲಿ ಸ್ವತಂತ್ರ ತಂಡಗಳಾಗಿ ನೆಲೆಸಿ, ಕಾಲವು ಗತಿಸಿದಂತೆ ಸಾಗುವಳಿಯೆ ಪ್ರಧಾನವಾದ ಜಹಗೀರು ಪದ್ಧತಿಯನ್ನು ಒಪ್ಪಿಕೊಂಡರು.

ರಾಜನು ಭೂಮಿಯನ್ನು ಜಹಗೀರಾಗಿ ಕೊಡುವುದೂ, ಇದರ ಆಶ್ರಿತರಾಗಿ ಸಾಮಾನ್ಯ ಜನರು ಬದುಕುವದೂ ವಾಡಿಕೆಯಾಗಿ ನಡೆದು ಬಂದವು. ದಿನ ಗಳು ಕಳೆದಂತೆ ಚೀನೀ ಜನರ ಈ ಸಮಾಜದಲ್ಲಿ *ಚಕ್ರಾಧಿಪತ್ಯವು ತಲೆ- ಯೆತ್ತಿತು. ಮೊದಲನೆಯ ಮನೆತನವು 'ಚೌ' ಎಂಬ ಹೆಸರಿನಿಂದ ಮೆರೆ ಯಿತು. ನಂತರ ಶುಂಗ, ಚಿನ್, ಹನ್, ಟಾಂಗ ಮುಂತಾದ ಪ್ರಸಿದ್ಧ ಮನೆ ತನಗಳು ರಾಜ್ಯಭಾರ ನಡಿಸಿ, ಕಲೆ, ವಾಙ್ಮಯ, ತತ್ವಜ್ಞಾನಗಳನ್ನು ಬೆಳೆಸಿದವು.

ಕ್ರಿಸ್ತಿ ಪೂರ್ವ ೫ ನೆಯ ಮತ್ತು ೬ ನೆಯ ಶತಮಾನಗಳಲ್ಲಿ ಆಗಿ ಹೋದ ಕುಂಗ ಫುತ್ಸೆ ಎಂಬಾತನು ಚೀನಿ ಜನರಿಗೆ ಮೊತ್ತ ಮೊದಲು ನೀತಿ ಬೋಧೆಯನ್ನು ಮಾಡಿದನು. ಇವನು ಚೀನಿಯರಿಗೆ ಇಂದಿಗೂ ಪರಮ ಪೂಜ್ಯನಾದ ಗುರುವೆಂದೆನಿಸಿದ್ದಾನೆ. ಉತ್ತರ ಚೀನದಲ್ಲಿ ಇವನು ಬೋಧೆ ಮಾಡುತ್ತಿದ್ದಾಗ ಲಾ ಉಟ್ಸೆ ಎಂಬ ಇನ್ನೊಬ್ಬ ಗುರುವು ದಕ್ಷಿಣ ಚೀನದಲ್ಲಿ ನೀತಿ ಬೋಧೆ ಮಾಡಿದನು. ಎಷ್ಟೋ ಕಾಲ ಕಳೆದ ಮೇಲೆ ಇಲ್ಲಿ ಬೌದ್ಧ ಮತವೂ ಪ್ರಚಾರದಲ್ಲಿ ಬಂದಿತು

ಪಿತೃಪೂಜೆಯು ಚೀನಿ ಜನರಲ್ಲಿ ಮೊದಲಿನಿಂದ ನಡೆದು ಬಂದ ಮಾತಾ ಗಿದೆ. ಚೀನಿ ಜನರು ಸ್ವಭಾವದಿಂದ ಶಾಂತತಾಪ್ರಿಯರು. ಪರರಾಜರು ಚೀನದ ಮೇಲೆ ಎಷ್ಟೋ ಸಲ ದಾಳಿ ಮಾಡಿದ್ದುಂಟು, ರಾಜ್ಯಕ್ರಾಂತಿಯಾದ ದ್ದುಂಟು, ಯುದ್ಧಗಳೂ ಜರುಗಿದ್ದುಂಟು, ಆದರೆ ಚೀನಿ ಸಾಮಾನ್ಯ ಮನುಷ್ಯನ ದಿನಚರಿಯು ಶಾಂತವಾಗಿಯೆ ಸಾಗಿದೆ.

ಆಧುನಿಕ ಪ್ರಪಂಚದಲ್ಲಿ ಚೀನವು ಹಿಂದೆ ಬಿದ್ದ ಕಾರಣವೇನೆಂದರೆ ಚೀನಿ ಮನುಷ್ಯನ ಪುರಾಣ ಪ್ರಿಯತೆ ಎಂದು ಹೇಳಬಹುದು. ಇದಕ್ಕಿಂತ ಬಲವತ್ತರ ಕಾರಣವೆಂದರೆ ಚೀನಿ ಮೂಲಾಕ್ಷರಗಳೆಂದು ಹೇಳಬಹುದು. ಇವು ಚಿತ್ರ ವಿಚಿತ್ರವಾಗಿದ್ದು ಸಂಖ್ಯೆಯಲ್ಲಿ ವಿಪುಲವಾಗಿವೆ. ಎಲ್ಲ ಅಕ್ಷರ ಗಳನ್ನು ಸಾಧಿಸಿಕೊಂಡು ಬರಹ ನಡಿಸುವದೆಂದರೆ ಅದೊಂದು ಸತ್ರವೇ ಸರಿ ! ಇದರಿಂದ ಕಲಿತವರು ಕಲಿಯದವರು ಎಂಬ ಅಂತರವು ಹೆಚ್ಚಾಯಿತು.

*ಕ್ರಿ. ಪೂ. ೨೦೦೦ಕಿಂತ ಹಿಂದೆಯೇ ಚೀನದಲ್ಲಿ ಚಕ್ರವರ್ತಿಗಳಿದ್ದರು.

ಇದರಂತೆ ಚೀನಿ ಸಮಾಜದ ಆರ್ಥಿಕ ರಚನೆಯು ಕಾರಣವೆನಿಸಿದೆ. ಕುಂಗ ಘುತ್ಸೆ ಮತ್ತು ಲಾಉಟ್ಸೆ ಇವರ ಅನುಯಾಯಿಗಳಲ್ಲಿ ನಡೆದ ವಾದಗಳು ಮತ್ತು ಅವರಲ್ಲಿಯ ಅಸಹನತಗಳು ಚೀನದ ಹಿನ್ನಡೆಗೆ ಕಾರಣವೆಂದು ಹೇಳುವದುಂಟು

ಒಟ್ಟಿನಲ್ಲಿ, ಚೀನಿ ಜನರದು ಬಹು ಪುರಾತನ ಸಂಸ್ಕೃತಿ. ಅವರ ಸಮಾಜದಲ್ಲಿ ಜಾತಿ ಪದ್ಧತಿಗಳು ಇರುವದಿಲ್ಲ. ಆದರೆ ವಂಶ ಭಕ್ತಿ ದೊಡ್ಡದು. ತಮ್ಮ ಮನೆತನದ ಕ್ಷೇಮಾಭಿವೃದ್ಧಿಗಾಗಿ ಸಾಮಾನ್ಯ ಚೀನಿ ಮನುಷ್ಯನು ಎಂಥ ಕಷ್ಟವನ್ನಾದರೂ ಸಹಿಸುವನು. ಮನೆತನದ ಪಾವಿತ್ರ್ಯವು ಅದರ ಪಿತೃವಿನ ಪಾವಿತ್ರ್ಯದಿಂದ ಮೊದಲಾಗುತ್ತದೆ ಸ್ವಭಾವದಿಂದ ಚೀನಿಯರು ದಯಾವಂತರು. ತಮ್ಮ ಗುಣದಿಂದ ಸಂಸ್ಕೃತಿಯಿಂದ ಚೀನಿಯರು ಇಂದಿಗೂ ಜಗತ್ತಿನಲ್ಲಿ ಹಿರಿಯರು.

## ಪ್ರಶ್ನಾವಲಿ:—

(೧) ನಿಮ್ಮ ನೆರೆಯ ಹೊಳೆ-ಹಳ್ಳಗಳು ನಿಮಗೆ ಯಾವ ರೀತಿಯಿಂದ ನೆರವು ನೀಡುವವೆಂಬುದನ್ನು ಗಮನಿಸಿರಿ.

(೨) ದಕ್ಷಿಣ ಹಿಂದುಸ್ಥಾನದಲ್ಲಿಯ ದ್ರಾವಿಡರು ಮೇಲಾದ ನಾವಿಕರು ಎಂಬುದನ್ನು ಅಲ್ಲಿಯ ನದಿ ಮತ್ತು ಕರಾವಳಿಯ ದೃಷ್ಟಿಯಿಂದ ವಿವೇಚಿಸಿರಿ.

(೩) ಜಲಸಾರ್ಗಗಳು ಒದಳ ಸುಲಭ ಮತ್ತು ಅಲ್ಪ ವೆಚ್ಚದ್ದು ಹೇಗೆ? ಉತ್ತರ ಬರೆಯಿರಿ.

# ೪. ಆರ್ಯರು.

## ಮಾನವ ಕುಲಗಳು:—

ಇಂದು ನಾವು ಭೂಮಿಯ ಮೇಲೆ ಕಾಣುವ ಬೇರೆ ಬೇರೆ ಆಕಾರ ರೂಪ, ರುಚಿಯ ಜನರು ಇಂತಹ ಒಂದೇ ಮೂಲ ಕುಲದಿಂದ ಹುಟ್ಟಿದರೆಂದು ಹೇಳಲು ಬರುವಂತಿಲ್ಲ. ಯಾಕೆಂದರೆ ತಮ್ಮ ದಿನದಿನದ ಚರಿತಾರ್ಥ ಸಾಗಿಸಲು ಮಾನವ ಪಂಗಡಗಳು ದೇಶದಿಂದ ದೇಶಕ್ಕೆ ಅಲೆದಾಡಿದವು. ಪರ್ಯಟನದಲ್ಲಿ ಮೇಲಿಂದ ಮೇಲೆ ಗುಂಪುಗಳು ಒಂದನ್ನೊಂದು ಕಂಡು ಬೆರೆತುಕೊಂಡವು. ಆದರೂ, ಆಕಾರ, ರುಚಿ, ರೂಪಗಳನ್ನು ಪ್ರಮಾಣವಾಗಿಟ್ಟುಕೊಂಡು ಬಲ್ಲವರು ಇಂದು ಪೃಥಿವಿಯ ಮೇಲೆ ಕಂಡುಬರುವ ಮಾನವರಲ್ಲಿ ೪ ಸ್ಥೂಲವಾದ ವರ್ಗಗಳನ್ನು ಕಲ್ಪಿಸುತ್ತಾರೆ. ಅವೆಂದರೆ —(೧) ಕಾಕೇಶಿಯನ್ (೨) ಮಂಗೋಲಿಯನ್ (೩) ನಿಗ್ರೋ (೪) ಆಸ್ಟ್ರೋಲಾಯಿಡ್. ಇವುಗಳಲ್ಲಿ ಕಾಕೇಶಿಯನ್ ವರ್ಗವು ಯುರೋಪ, ಹಿಂದುಸ್ತಾನ, ಪರ್ಶಿಯಾ, ಮತ್ತು ಭೂಮಧ್ಯ ಸಮುದ್ರದ ಪ್ರದೇಶಗಳನ್ನು ವ್ಯಾಪಿಸಿದೆ. ಮಂಗೋಲಿಯನ್ ವರ್ಗವು ಚೀನ, ಜಪಾನ, ಬ್ರಹ್ಮದೇಶ, ಮತ್ತು ಅಮೇರಿಕೆಯ ಕೆಲವು ಭಾಗಗಳಲ್ಲಿ ಕಂಡುಬರುವವು. ನಿಗ್ರೋ ಜನರು ಆಫ್ರಿಕೆಯಲ್ಲಿ ಹೆಚ್ಚಾಗಿ ಕಂಡುಬರುವರು. ಆಸ್ಟ್ರೋಲಾಯಿಡ ಜನರು ಆಸ್ಟ್ರೇಲಿಯಾ, ನ್ಯೂಝಿಲಂಡ ಮತ್ತು ಉಳಿದ ಪಾಸಿಫಿಕ ನಡುಗಡೆಗಳಲ್ಲಿ ಕಂಡುಬರುವರು.

## ಆರ್ಯರ ಬರುವಿಕೆ:—

ಮೇಲೆ ಹೇಳಿದ ಮಾನವ ಕುಲಗಳಲ್ಲಿ ಕಾಕೇಶಿಯನ ಮತ್ತು ಮಂಗೋಲಿಯನ್ ಎಂಬೆರಡು ಕುಲಗಳೇ ಇಂದು ನಮ್ಮ ಜಗತ್ತಿನಲ್ಲಿ ಪ್ರಗತಿಯಲ್ಲಿ ಮುಂದುವರಿಯುತ್ತಿದ್ದುದು ಕಂಡುಬರುತ್ತಿದೆ. ಇವೆರಡರಲ್ಲಿ ಕಾಕೇಶಿಯನ್ ಜನರೇ ಹೆಚ್ಚು ಮುಂದುವರಿದಿದ್ದಾರೆ. ಇಂದು ಎಷ್ಟೋ ಶಾಸ್ತ್ರೀಯ ಶೋಧನೆಗಳನ್ನು ನಡಿಸಿ ಜೀವನವನ್ನು ಸುಖಮಯ ಮಾಡಿಕೊಂಡಿ

ಬ್ಬಾರೆ ಮಧ್ಯ ಏಶಿಯದ ಕಾಕೇಸಸ್ ಬೆಟ್ಟಗಳಿಂದ ಇವರು ಮೊದಲು ಹೊರ
ಬಿದ್ದರೆಂದು ಹೇಳಿಕೆಯಿದೆ. ಆರ್ಯ ಕುಲವು ಕಾಕೇಶಿಯನ್ ಕುಲದ ಮೂಲ
ವೆಂದು ಹೇಳುವವರುಂಟು ಆರ್ಯರ ಮೂಲ ನಿವಾಸಸ್ಥಾನದ ಬಗ್ಗೆ ವಾದ
ವಿದ್ದರೂ ಮಧ್ಯ ಏಶಿಯದಿಂದ ಇವರು ಪಶ್ಚಿಮ ಮತ್ತು ದಕ್ಷಿಣಾಭಿಮುಖವಾಗಿ
ಸಾಗಿದರೆಂಬುದು ನಿರ್ವಿವಾದವು.

ಆರ್ಯರು ಹಿಂದುಸ್ಥಾನಕ್ಕೆ ಬಂದದ್ದು ಕ್ರಿ ಪೂ ೨೫೦೦--೧೫೦೦
ವರ್ಷಗಳಲ್ಲಿ ಎಂದು ಬಲ್ಲವರು ಅನುಮಾನಪಡುವರು. ಆದರೆ ಕ್ರಿ ಪೂ.
೨೦೦೦ ಎಂದು ನಾವು ನಿರ್ವಿವಾದವಾಗಿ ಇಟ್ಟುಕೊಳ್ಳಬಹುದು. ಇವರು
ಚಪಲವಾದ ಕುದುರೆಗಳನ್ನೇರಿ ತಂಡ ತಂಡವಾಗಿ ಬಂದರು. ಇವರ ಮೂಲ
ಸ್ಥಾನವಾದ ಮಧ್ಯಏಶಿಯದ ಸ್ಟೆಪ್ಪೆ ಪ್ರದೇಶಗಳಿಂದ ಹೊರಬಿದ್ದು ದೇಶ ಪ್ರದೇಶ
ಗಳನ್ನು ಆಕ್ರಮಿಸುತ್ತ ಮುಂದೆ ಸಾಗಿದರು ಇವರ ತಂಡಗಳಲ್ಲಿ ಸಾಮಾ
ನ್ಯವಾಗಿ ಎರಡು ತರದ ಜನರಿದ್ದರು. ವೀರಾಳುಗಳು ಮತ್ತು ಒಕ್ಕಲಿಗರು
ನೆಲೆಯೂರಿದಂತೆ ಒಕ್ಕಲಿಗರು ಹೆಚ್ಚಾಗಿ, ವೀರಾಳುಗಳು ಕಡಿಮೆಯಾದರು.
ಆರ್ಯರು ಗುಂಪು ಗುಂಪಾಗಿ ನೆಲೆಸಿದರಷ್ಟೆ? ಈ ಗುಂಪಿಗೆ ಕುಲವೆಂದು ಕರೆ
ದರು. ಒಂದು ಕುಲದಲ್ಲಿ ಹಲವಾರು ಕುಟುಂಬಗಳಿದ್ದವು. ಕುಟುಂಬದಲ್ಲಿ
ತಂದೆಯೇ ಶ್ರೇಷ್ಠನು. ಹಲವಾರು ಕುಲಗಳು ಸೇರಿದರೆ ಒಂದು 'ಜನ'
ವಾಗಿದ್ದಿತು.

ಪ್ರತಿ ಕುಲಕ್ಕೂ ಕುಲ ಮುಖ್ಯನೆಂಬವನು ಇದ್ದೇ ಇರುತ್ತಿದ್ದನು. ಬೇಟೆ
ಯಲ್ಲಿ, ಯುದ್ಧದಲ್ಲಿ, ವೀರ, ತೇಜಸ್ವಿ, ಬಲಿಷ್ಠನಾಗಿದ್ದವನನ್ನೇ ನಾಯಕನೆಂ
ದು ಎಲ್ಲರೂ ಒಪ್ಪಿಕೊಳ್ಳುತ್ತಿದ್ದರು. ಯುದ್ಧದಲ್ಲಿ ದಳಪತಿ, ಬೇಟೆಯಲ್ಲಿ ನಾ
ಯಕ, ಕುಲವೆಲ್ಲಕ್ಕೂ ಮಂಗಲವನ್ನು ಬೇಡಿಕೊಂಬಾಗ ಇವನೇ ಪ್ರತಿನಿಧಿ.
ಇವನಿಗೆ ರಾಜನೆಂಬ ಹೆಸರು ಬಂದಿತು.

ಕುಲಸ್ಥರು ಒಟ್ಟಾಗಿ ಸಮಿತಿಗೂಡಿ ರಾಜನಾರಾಗಬೇಕೆಂಬುದನ್ನು ನಿರ್ಣ
ಯಿಸುತ್ತಿದ್ದರು. ಯುದ್ಧಸಮಯದಲ್ಲಿ ಸಮಿತಿ ನೆರೆದು ಯುದ್ಧನಡಿಸಬೇಕೊ
ಕೊನೆಗಾಣಿಸಬೇಕೊ ನಿರ್ಣಯವಾಗುತ್ತಿತ್ತು. ಕುಲಸ್ಥರು ನೆರೆಯತಕ್ಕ
ಇತರ ಕೂಟಗಳಿದ್ದವು. ವ್ಯಾಜ್ಯಪರಿಹಾರ, ಯಜ್ಞಯಾಗಾದಿಗಳ ನಡಿಸು

ವದು, ತತ್ವವಿಚಾರ, ವಾದವಿವಾದ ನಡೆಸುವದು, ಇಂತಹಗಳಿಗಾಗಿ ಸಭೆ ಸೇರುತ್ತಿದ್ದರು. ಇಂಥ ಕೂಟಗಳಿಗೆ ಸಭೆ ಅಥವಾ ವಿದಥಾ ಎಂದು ಕರೆಯುವದುಂಟು.

ಈ ಕಾಲದಲ್ಲಿ ಗ್ರಾಮಜೀವನವೇ ಮುಖ್ಯವಾಗಿತ್ತು. ಮೊಹೆಂಜೊದಾರೊದಂಥ ಪಟ್ಟಣಗಳಿದ್ದಿಲ್ಲ. ಗೋಸಮೂಹವೇ ಐಶ್ವರ್ಯಲಕ್ಷಣವಾಯಿತು. ನಾಣ್ಯಗಳು ಗೊತ್ತಿಲ್ಲದ್ದಕ್ಕಾಗಿ ಬೆಲೆ ಕಟ್ಟುವದಕ್ಕೆ ಗೋಗಳನ್ನೇ ಎಣಿಸಿದರು. ಕಾಡುಹಂದಿ ಆನೆ ಸಿಂಹಗಳನ್ನು ಬೇಟೆಯಾಡುತ್ತ ನದೀತೀರದಲ್ಲಿ ಗ್ರಾಮುಗಳನ್ನು ಕಟ್ಟಿಕೊಂಡು ನದೀಜಲದಿಂದ ಸಾಗುವಳಿ ಮಾಡುತ್ತ ಗೋದಿ ಭತ್ತಗಳನ್ನು ಬೆಳೆಯುತ್ತಿದ್ದರು.

ಸಿಂಧು ನದಿಯ ಮುಖಕ್ಕೆ ಬರುವತನಕ ಸಮುದ್ರವನ್ನು ಆರ್ಯರು ಕಂಡಿದ್ದಿಲ್ಲ. ಆದ್ದರಿಂದ ದೊಡ್ಡ ನದಿಗೆ ಸಮುದ್ರವೆಂದು ಕರೆದರು.

ಕುದುರೆಗಳನ್ನು ರಥಗಳಿಗೂ ಹತ್ತಲಿಕ್ಕೂ ಬಳಿಸುವರು. ನಾಯಿಗಳನ್ನು ಮನೆ ಕಾಯಲು ಮತ್ತು ಬೇಟೆಗಾಗಿ ಉಪಯೋಗಿಸುವರು.

**ಆರ್ಯರ ಸಾಮಾಜಿಕ ಜೀವನ:—**

ಮನೆಗೆ ತಂದೆಯೇ ಯಜಮಾನನು. ಪುತ್ರ ಮತ್ತು ಬಂಧುಗಳು ಆತನಿಗೆ ಪಶುಪಾಲನೆ, ಬೇಟೆ ಮುಂತಾದ್ದರಲ್ಲಿ ನೆರವಾಗುತ್ತಿದ್ದರು. ಮನೆ ಹೊರಗಿನ ಕೆಲಸಗಳನ್ನು ಗಂಡಸರು ನಿರ್ವಹಿಸುತ್ತಿದ್ದರು. ಮನೆಯಲ್ಲಿ ಸ್ತ್ರೀಯರು ಪ್ರತಿಯೊಬ್ಬರ ಸೌಖ್ಯಕ್ಕೆ ಗಮನಕೊಟ್ಟು, ನೂಲುವದು, ಹಾಲು ಕರೆಯುವದು, ಅಗ್ನಿ ಕಾರ್ಯಕ್ಕೆ ಅಣಿ ಮಾಡುವದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು.

ಆರ್ಯರು ಗೋದಿ, ಬೆಣ್ಣೆ, ಹಾಲು, ಮಾಂಸ, ಮುಂತಾದುದನ್ನು ತಿನ್ನುತ್ತಿದ್ದರು. ಮೊದಮೊದಲು ಮಾಂಸ ತಿಂದರು. ಬರಬರುತ್ತ ಅದು ನಿಷಿದ್ಧವಾಯಿತು. ಯಜ್ಞಗಳಲ್ಲಿ ಮಾತ್ರ ಅದನ್ನು ಬಳಿಸಿದರು. ಸೋಮವನ್ನು ಕುಡಿದು ದೇವತೆಗಳಿಗೆ ಅರ್ಪಿಸಿದರು. ಕಾಲಕಳೆದಂತೆ ಮಾಂಸಾಹಾರವನ್ನು ತ್ಯಜಿಸಿದರು.

ಚರ್ಮ, ಉಣ್ಣೆ, ತೊಗಟೆ, ಹತ್ತಿ—ಇವು ವಸ್ತ್ರಸಾಮಗ್ರಿಗಳಾಗಿದ್ದವು.

ಯುದ್ಧದಲ್ಲಿ ಶೀರ್ಷ ಕವಚಗಳನ್ನು ಉಪಯೋಗಿಸಿದರು. ಹೆಂಗಸರು, ಜಡೆ ಹೆಣೆದು ಗಂಟು ಕಟ್ಟುತ್ತಿದ್ದರು. ತಲೆಗೂದಲುಗಳ ಅಲಂಕಾರದಲ್ಲಿ ಆಸ್ಥೆ ಹೆಚ್ಚು. ಒಟ್ಟಿನಲ್ಲಿ ಆರ್ಯ ಸ್ತ್ರೀಪುರುಷರು ಆಕೃತಿಯಲ್ಲಿ ಸಹಜ ಗಂಭೀರ ರಾಗಿದ್ದು, ತಮ್ಮ ಉಡಿಗೆ-ತೊಡಿಗೆಗಳಲ್ಲಿ ಸರಳವಾದ ಲಾವಣ್ಯವನ್ನು ಬೀರುತ್ತಿದ್ದರು.

ಸ್ತ್ರೀಯರ ಅಧಿಕಾರವು ಪುರುಷರ ಅಧಿಕಾರದ ಸಮಾನವಾದುದಿತ್ತು. ಸ್ತ್ರೀಯರು ಯುದ್ಧರಂಗ, ಋಷಿಪದವಿ, ಬ್ರಹ್ಮಚರ್ಯ, ವಿದ್ಯಾರ್ಜನೆಗಳಲ್ಲಿ ಪುರುಷರನ್ನು ಸರಿಗಟ್ಟಿದರೂ ಬಾಲವಿವಾಹವೇ ಇರಲಿಲ್ಲ ಪುನರ್ವಿವಾಹಕ್ಕೆ ಆತಂಕವೂ ಇರಲಿಲ್ಲ. ಸ್ತ್ರೀಯರು ಗೃಹಕೃತ್ಯದಲ್ಲಿ ನಿರತರಾಗಿರುತ್ತಿದ್ದರು. ಆದರೆ ಅವರನ್ನು ಯಾರೂ ಅಧಮರೆಂದೂ, ನೀಚರೆಂದೂ ತಿಳಿದಿರಲಿಲ್ಲ. ಅವರಿಗೆ ಅಪೂರ್ವವಾದ ಗೌರವವೂ ಅಧಿಕಾರವೂ ಇದ್ದವು.

ಯಜ್ಞಸಮಾಪ್ತಿಯಲ್ಲಿ ಆರ್ಯರಲ್ಲಿ ಕೆಲವರು ಸೋಮಪಾನದಿಂದ ಮತ್ತರಾಗುವದೂ, ಕೆಲವರು ದ್ಯೂತದಲ್ಲಿ ಮೈಮರೆತು ತಮ್ಮ ಹೆಂಡಿರು ಮಕ್ಕಳನ್ನೂ ಸ್ವಂತ ಸ್ವಾತಂತ್ರ್ಯವನ್ನೂ ಪಣವಾಗಿ ತೊಟ್ಟು ಕೊನೆಗೆ ಪಶ್ಚಾತ್ತಾಪ ಪಡುವದೂ ಅಪರೂಪವಾಗಿದ್ದಿಲ್ಲ. ದ್ಯೂತವು ವೀರರ ಲಕ್ಷಣವೆನಿಸಿತು. ದ್ಯೂತಕ್ಕೆ ಕರೆದಾಗ ಬಾರದಿರುವದು ಹೇಡಿಯ ಲಕ್ಷಣ.

ಬೇಟೆ ಯುದ್ಧಗಳು ಮುಖ್ಯ ವ್ಯವಸಾಯಗಳು. ಮನೆ ಕಟ್ಟುವದು, ರಥ ಡೋಣಿಗಳನ್ನು ಕಟ್ಟುವದು, ಆಯುಧ ತಯಾರಿಸುವದು, ಚಿನ್ನ ಬೆಳ್ಳಿ ತಾಮ್ರ ಕಬ್ಬಿಣ ಪಾತ್ರಗಳನ್ನು ನಿರ್ಮಿಸುವದು, ನೇಕಾರ ಬಡಿಗ ಕಮ್ಮಾರ ಅಕ್ಕಸಾಲಿಗ ಕುಂಬಾರ ನಾವಿಕ ಬಣಕಾರ ನಟ ಮುಂತಾದವರ ಉದ್ಯೋಗ ಗಳು ಪ್ರಚಲಿತವಿದ್ದವು.

ಆರ್ಯರಿಗೆ ಬಯಲಲ್ಲಿಯ ಆಟಪಾಟಗಳು ಹೆಚ್ಚು ಶೇರುತ್ತಿದ್ದವು ಓಟ, ಹಾರುವದು, ಈಸುವದು, ಗುರಿ ಹೊಡೆಯುವದು, ಕುಸ್ತಿ ಆಡುವದು ಗಾನನೃತ್ಯಗಳು ಮುಂತಾದವು ಅವುಗಳಲ್ಲಿ ಮುಖ್ಯವಾಗಿದ್ದವು.

ಪ್ರತಿಯೊಂದು ಕುಲಕ್ಕೆ ಒಬ್ಬ ಕುಲಪುರೋಹಿತನಿದ್ದು ಅವನ ಅಂಕಿತ

ದಲ್ಲಿ ಎಲ್ಲ ಚಟುವಟಿಕೆಗಳು ನಡೆದವು. ಆದರೆ ಈಗಿನಂತೆ ಜಾತಿ-ಭೇದವಿದ್ದಿಲ್ಲ

ಆರ್ಯರು ಪ್ರಕೃತಿಯನ್ನೇ ಪೂಜಿಸಿದರು. ಇವರು ಸೃಷ್ಟಿಯ ಅದ್ಭುತ ವ್ಯಾಪಾರಗಳನ್ನು ಕಂಡು ಅಚ್ಚರಿಬಟ್ಟರು. ಮಾರುತ, ಕತ್ತಲೆ ಮುಂತಾದ್ದ ರಲ್ಲಿ ದೇವತೆಗಳನ್ನು ಕಂಡರು. ವರುಣ, ಅಗ್ನಿ, ಇಂದ್ರ, ಉಷಸ್ ಮುಂತಾದ ದೇವತೆಗಳನ್ನು ಪೂಜಿಸಿದರು ಆದರೆ ಆಗ ದೇವಸ್ಥಾನವಾಗಲಿ ಮೂರ್ತಿಪೂಜೆಯಾಗಲಿ ಇರಲಿಲ್ಲ

**ಸಪ್ತಸಿಂಧವ (ಪಂಜಾಬ) ಪ್ರವೇಶ:—**

ಹಿಮವತ್ಪ್ರಾಂತದಿಂದ ಚಲಿಸಿ ಆರ್ಯರು ಮೊದಲು ಅಫಗಾನಿಸ್ತಾನದ ಬಯಲಲ್ಲಿ ನೆಲಿಸಿದರು ಬಳಿಕ ಸಿಂದು ನದಿಯ ಪ್ರಾಂತಕ್ಕೆ ಬಂದರೆಂದು ಹೇಳಿಕೆಇದೆ. ಪಂಚನದ (ಪಂಜಾಬ) ಪ್ರಾಂತಕ್ಕೆ ಬಂದ ಕೂಡಲೆ ಅಲ್ಲಿಯ ಮೂಲನಿವಾಸಿಗಳಾದ ನಿಷಧರೆಂಬ ಜನಾಂಗದ ಕೂಡ ಹೋರಾಡಬೇಕಾ ಯಿತು. ನಿಷಧರು ಗಿಡ್ಡರೂ ಚಪ್ಪಟೆ ಮೂಗಿನವರೂ ಇದ್ದರು. ಹೆಚ್ಚು ಸಂಸ್ಕೃತ ಮತ್ತೊಂದು ವೈರಿ ತಂಡವೆಂದರೆ ವೃತ್ರರದು ಇವರು ಆರ್ಯ ರಿಂದ ಸೋಲಿಸಲ್ಪಟ್ಟಿದ್ದರೂ ನೂರಾರು ವರ್ಷ ಆರ್ಯರಿಗೂ ಇವರಿಗೂ ಪರ ಸ್ಪರ ವಿರೋಧವು ಇದ್ದೇ ಇತ್ತು. ಸಮಯ ದೊರೆತಂತೆ ಪರಸ್ಪರ ಹೋರಾಟ ನಡೆಯಿತು. ಈ ವೃತ್ರರನ್ನು ಗೆದ್ದ ಬಳಿಕ ಆರ್ಯ ಕುಲಗಳಲ್ಲಿಯೇ ಪರ ಸ್ಪರ ಕಲಹಗಳು ತಲೆದೋರಿದವು. ಪುರು ಭರತ ತ್ರಿತ್ಸು ಮುಂತಾದ ಕುಲ ಗಳು ಈ ರೀತಿ ಹೋರಾಡಿದವು. ರಾವೀ ನದಿಯ ಪ್ರದೇಶಕ್ಕಾಗಿ ಹತ್ತು ಕುಲಗಳವರು ಆಶೆಬಟ್ಟು ಜಗಳಾಡಿದರು. ಇದರಲ್ಲಿ ತ್ರಿತ್ಸು ಕುಲದ ನಾಯ ಕನಾದ ಸುದಾಸನು ವಶಿಷ್ಠ ಋಷಿಯಿಂದ ಪ್ರೇರಿತನಾಗಿ ಸಾಹಸದಿಂದ ಪುರು ಕುತ್ಸನೆಂಬ ವೈರಿಯನ್ನು ಗೆದ್ದನು. ಇದೇ ಕುಲಕಲಹದಲ್ಲಿ ಪ್ರಸಿದ್ಧವಾದ ಹತ್ತು ರಾಜರ ಕಾಳಗ. ಈ ಕಲಹಗಳಲ್ಲಿ ಭರತ ಕುಲದವರು ಜಯಶಾಲಿಗ ಳಾಗಿ ದೇಶದಲ್ಲೆಲ್ಲ ಹರಡಿದರು. ಕಾಲಾಂತರದಿಂದ ಅವರ ಹೆಸರೇ ಸಮಸ್ತ ದೇಶಕ್ಕೂ ಪ್ರಾಪ್ತವಾಯಿತು.

**ಮಧ್ಯದೇಶ ಪ್ರವೇಶ:—**

ಬರಬರುತ್ತ ಆರ್ಯರು ಪಂಜನದ ಪ್ರಾಂತದಿಂದ ಪೂರ್ವಾಭಿಮುಖ ವಾಗಿ ಹೊರಟು ಈಗಿನ ಗಂಗಾನದಿಯ ಬಯಲನ್ನು ಸೇರಿದರು. ಇದಕ್ಕೆ ಆರ್ಯರು ಕೊಟ್ಟ ಹೆಸರು "ಮಧ್ಯ ದೇಶ" ವೆಂಬುದು. ಈ ಕಾರ್ಯವು ಒಂದೇ ಸಮಯಕ್ಕೆ ಜರುಗಿರದೆ ಕೆಲವು ಕಾಲದವರೆಗೆ ನಡೆಯಿತು ಬಲ್ಲವರು ಇದು ಕ್ರಿ. ಪೂ. ೧೫೦೦-೧೦೦೦ ವರೆಗೆ ನಡೆದಿರಬಹುದೆಂದು ತರ್ಕಿಸು ತ್ತಾರೆ

ಈ ಆಕ್ರಮಣ ಕಾಲದಲ್ಲಿ ಆರ್ಯರಿಗೆ ಇಲ್ಲಿಯೂ ಮೂಲನಿವಾಸಿ ಗಳ ಕೂಡ ಹೋರಾಡಬೇಕಾಯಿತು. ಇವರನ್ನು ದಸ್ಯು ದಾಸ ದಾನವರು ಎಂದು ಆರ್ಯರು ಕರೆದರು. ಮೂಲನಿವಾಸಿಗಳಾದ ದ್ರಾವಿಡರು ಆರ್ಯರಿಗಿಂತ ಶ್ರೇಷ್ಠ ಸಂಸ್ಕೃತಿಯುಳ್ಳವರಿದ್ದು ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು ಧೀರರೀತಿಯಿಂದ ಬಾಳಿದರು. ಆರ್ಯರು ದಸ್ಯುಗಳ ಪುರಗ ಳನ್ನು ಆಕ್ರಮಿಸಿಕೊಂಡು ಭದ್ರರಾದ ಮೇಲೆ ನಿಧಾನವಾಗಿ ಇಬ್ಬರಲ್ಲಿಯ ಶತ್ರು ತ್ವವೆಂಬುದು ಕಳೆದುಹೋಗಿ ಮಿತ್ರತ್ವ ಬೆಳೆಯಿತು. ಕ್ರಮೇಣ ಆರ್ಯ ಮತ್ತು ಅನಾರ್ಯರ ನಾಗರಿಕತೆಗಳು ಒಟ್ಟಿಗೆ ಕಲೆತವು

ಈ ಕಲೆಯುವಿಕೆಯು ಆರ್ಯರ ಉಚ್ಚತನದ ಮೇಲೆ ಅವಲಂಬಿಸದೆ ಅನಾರ್ಯರ ಮುಖಂಡರನ್ನು ಆರ್ಯರು ಮೇಲಿನ ವರ್ಗಗಳಲ್ಲಿ ಸೇರಿಸಿ ಕೊಂಡದ್ದರಿಂದುಂಟಾಯಿತು. ಅಂದರೆ ಅನಾರ್ಯರಲ್ಲಿ ಕೆಲವರು ಬ್ರಾಹ್ಮಣ ಕ್ಷತ್ರಿಯರಾಗಿ ಪರಿವರ್ತನೆ ಹೊಂದಿದರು. ಆರ್ಯರು ಅನಾರ್ಯ ದೇವತೆ ಗಳಿಗೂ ಮನ್ನಣೆ ಕೊಟ್ಟರು. ಎಷ್ಟೋ ಅನಾರ್ಯದೇವತೆಗಳಿಗೆ ಆರ್ಯರು ಪೂಜೆ ಸಲ್ಲಿಸಿದರು.

ಆರ್ಯ—ಅನಾರ್ಯ ಭೇದದ ತಳಹದಿಯು "ವರ್ಣದ್ವೇಷ" ವಾ ದ್ದರಿಂದಲೂ ಯಜ್ಞಗಳಲ್ಲಿ ಅನಾರ್ಯರ ಅಪನಂಬಿಗೆಯಾದ್ದರಿಂದಲೂ ಆ ರ್ಯ—ಅನಾರ್ಯ ಸಂಕಲನವು ಜಾತಿಭೇದಕ್ಕೆ ಬೀಜವಾಗಿ ಪರಿಣಮಿಸಿತು.

**ಆರ್ಯಸಂಸ್ಕೃತಿ:—**

ಮನುಷ್ಯ ಜೀವನದ ಮೆಟ್ಟಲುಗಳನ್ನು, ಅವುಗಳಲ್ಲಿ ಯೋಗ್ಯವಾದ


KARNATAK No. ೨೨೨

ಕಾರ್ಯಗಳನ್ನು, ಕಂಡುಹಿಡಿದು ಜೀವನದಲ್ಲಿ ಆರ್ಯರು ೪ ಆಶ್ರಮಗಳನ್ನು ಕಲ್ಪಿಸಿದರು.

(೧) ಬ್ರಹ್ಮಚರ್ಯ:—ಈ ಕಾಲದಲ್ಲಿ ಹುಡುಗತನವಿದ್ದು ಅದನ್ನು ಗುರುಗಳ ಸೇವೆಯಲ್ಲಿಯೂ ವಿದ್ಯಾರ್ಜನೆಯಲ್ಲಿಯೂ ಕಳೆಯಬೇಕು.

(೨) ಗೃಹಸ್ಥ:— ವಿದ್ಯೆ ಮುಗಿದ ಬಳಿಕ ಮದುವೆ ಮಾಡಿಕೊಂಡು ಪ್ರಪಂಚವನ್ನು ಹೂಡಬೇಕು ಈ ಕಾಲದಲ್ಲಿ ಯಜನ ದಾನ ಅತಿಥಿ ಸತ್ಕಾರಗಳನ್ನು ನಡಿಸಬೇಕು.

(೩) ವಾನಪ್ರಸ್ಥ.— ಈ ಕಾಲದಲ್ಲಿ ತನ್ನ ಮನೆತನವನ್ನು ಮಕ್ಕಳಿಗೆ ಒಪ್ಪಿಸಿ ತಾನು ಅಡಿವೆಯಲ್ಲಿ ಪತ್ನೀಸಮೇತನಾಗಿದ್ದು ಭಗವದುಪಾಸನೆ ನಡಿಸಬೇಕು.

(೪) ಸಂನ್ಯಾಸ — ಸರ್ವಸಂಗ ಪರಿತ್ಯಾಗಮಾಡಿ ತತ್ವೋಪದೇಶ ಮಾಡುತ್ತ ಲೋಕಸಂಗ್ರಹ ಮಾಡಬೇಕು. ಇಂಥ ಪ್ರಸಂಗದಲ್ಲಿ ಜೀವ ಹೋದರೂ ಚಿಂತೆ ಇಲ್ಲ.

ಪಂಜಾಬದಲ್ಲಿ ನೆಲೆಸುವದಕ್ಕಿಂತ ಮೊದಲು ಆರ್ಯರು ಋಗ್ವೇದವನ್ನು ರಚಿಸಿದ್ದರು. ಗಂಗಾನದಿಯ ದಂಡೆಯಮೇಲೆ ಮಿಕ್ಕ ವೇದಗಳು ರಚಿತವಾದವೆಂದು ಹೇಳಿಕೆಯದೆ. ಒಟ್ಟಾರೆ ವೇದಗಳು ನಾಲ್ಕು ಇರುವವು. ಅವೆಂದರೆ — (೧) ಋಗ್ವೇದ (೨) ಯಜುರ್ವೇದ (೩) ಸಾಮವೇದ (೪) ಅಥರ್ವಣವೇದ.

ಋಗ್ವೇದ ಯಜುರ್ವೇದಗಳಲ್ಲಿ ಆರ್ಯರು ತಮ್ಮ ದೇವತೆಗಳಾದ ಅಗ್ನಿ ವರುಣ ಇಂದ್ರರಿಗೆ ಸಲ್ಲಿಸಿದ ಸ್ತೋತ್ರಗಳಿರುವವು. ಇವುಗಳನ್ನು ಆಗಿನ ಕಾಲದ ಋಷಿಗಳಾದ ವಶಿಷ್ಠ ವಿಶ್ವಾಮಿತ್ರಾದಿಗಳು ಅಂದರೆಂದೂ ಅವು ತಂದೆಯಿಂದ ಮಗನಿಗೆ ನಡೆದುಬಂದವೆಂದೂ ಹೇಳಿಕೆಯಿದೆ.

ಸಾಮ ಅಥರ್ವವೇದಗಳ ವಿಷಯಗಳು ಬೇರೆ ಬೇರೆ ಇರುತ್ತವೆ. ಸಾಮ ವೇದದಲ್ಲಿ ಋಕ್‌ಯಜುರ್ವೇದಗಳಲ್ಲಿ ಹೇಳಿದ, ಸ್ತೋತ್ರಗಳನ್ನು ರಾಗದಿಂದ ಧಾಟಿ ಹಿಡಿದು ಅನ್ನುವ ಕ್ರಮವನ್ನು ಹೇಳಿದೆ. ಇದರಲ್ಲಿ ಕೆಲ ಮಟ್ಟಿಗೆ ಗಾಯನ ಸ್ವರಾಘಾತ ಧ್ವನಿಯ ಏರಿಳಿತ ಮುಂತಾದವು ವಿವೇಚಿಸ

ಲ್ಪಟ್ಟಿವೆ. ಸಾಮವೇದದ ರೀತಿಯಿಂದ ಅಂದರೆ ಮಾತ್ರ ಋಕ್‌ಯಜುರ್ವೇದಗಳ ಸ್ತೋತ್ರಗಳ ಪೂರ್ಣಪರಿಣಾಮವಾಗುತ್ತದೆಂದು ಹೇಳಿಕೆ.

ಅಥರ್ವದಲ್ಲಿ ವೈರಿಗಳಾದ ದಸ್ಯುಗಳು ನಾಶಹೊಂದುವ ಮಂತ್ರಗಳೂ ಅವುಗಳ ವಿಧಾನವೂ ಹೇಳಿವೆ. ಆರ್ಯರು ಸ್ವಜನರೊಂದಿಗೂ ದಸ್ಯುಗಳೊಂದಿಗೂ ಹೋರಾಡಿದರಷ್ಟೇ! ಈ ಹೋರಾಟದಲ್ಲಿ ವೈರಿಗಳು ತಾವಾಗಿ ಇದ್ದಲ್ಲಿಯೇ ನಾಶಹೊಂದಲೆಂದು ಅಥರ್ವ ಮಂತ್ರ ಮತ್ತು ವಿಧಾನಗಳನ್ನು ಉಪಯೋಗಿಸಿದರು. ಈಗಿನ ಮಾಟ ಮಾಯ ಇಂದ್ರಜಾಲ ಮಹೇಂದ್ರಜಾಲ ಮುಂತಾದವುಗಳ ಮೂಲವು ಈ ವೇದದಲ್ಲಿದೆ ಎಂದು ಹೇಳಿಕೆಯಿದೆ

ಆದರೆ ವೇದ ಸಾಹಿತ್ಯವು ಇಷ್ಟಕ್ಕೆ ನಿಲ್ಲದೆ ಬೇರೆ ಗ್ರಂಥ ರಾಶಿಗೂ ಸಲ್ಲುತ್ತದೆ. ಯಾವುವೆಂದರೆ

(೧) ಬ್ರಾಹ್ಮಣಗಳು
(೨) ಆರಣ್ಯಕಗಳು
(೩) ಉಪನಿಷತ್ತುಗಳು

(೧) ಬ್ರಾಹ್ಮಣಗಳೆಂಬವು ಯಜ್ಞ ಯಾಗಾದಿಗಳ ಕ್ರಮವನ್ನು ವಿವರಿಸುವ ಗದ್ಯ ಗ್ರಂಥಗಳು
ಸಾಧಾರಣವಾಗಿ ಇವು ವೇದಗಳಿಗೆ ಸಹಾಯಕವಾದ ಭಾಗಗಳಾಗಿವೆ. ವೇದಗಳಿಗೆ ಬೇರೆ ಬೇರೆ ಬ್ರಾಹ್ಮಣ ಗ್ರಂಥಗಳಿವೆ.

(೨) ಆರಣ್ಯಕಗಳು ಸಹ ಯಜ್ಞಗಳ ಕ್ರಮವನ್ನು ಹೇಳುವವು. ಆದರೆ ಇವನ್ನು ಆರಣ್ಯಗಳಲ್ಲಿಯೇ ಹೇಳಿಕೊಂಡದ್ದರಿಂದ ಈ ಹೆಸರು ಬಂದಿದೆ. ಜೊತೆಗೆ ತಪಸ್ಸಿನ ಕ್ರಮವೂ ಹೇಳಲ್ಪಟ್ಟಿದೆ.

(೩) ಉಪನಿಷತ್ತುಗಳು: ವೇದಗಳಲ್ಲಿ ಹೇಳಿದ ಯಜ್ಞಯಾಗಾದಿ ಕರ್ಮಕಾಂಡಕ್ಕೆ ಬೇಸತ್ತು ಕೆಲವು ಜನರು ಅಡವಿ ಸೇರಿ ಶಾಂತ ರೀತಿಯಲ್ಲಿ ವಿಚಾರ ಮಾಡತೊಡಗಿದರು. ತತ್ಪರಿಣಾಮವಾಗಿ ಉಪನಿಷತ್ತುಗಳು ಹೊರಹೊಮ್ಮಿದವು. ಇವು ಸಂಭಾಷಣೆ ರೂಪದಲ್ಲಿದ್ದು ತತ್ವವಿಚಾರವನ್ನೊಳಗೊಂಡಿವೆ. ಇವುಗಳಿಗೆಲ್ಲ ವೇದಾಂತ ಅಥವಾ ಜ್ಞಾನದ ಗುರಿ ಎಂಬ ಹೆಸರು. ಈ

ವೇದಾಂತತತ್ವಗಳೆಂದರೆ — " ವಿಶ್ವವು ಬ್ರಹ್ಮಮಯವಾಗಿದೆ. ಆದರೆ ಬ್ರಹ್ಮನು ಆತ್ಮರೂಪದಲ್ಲಿದ್ದಾನೆ ಅಂದರೆ ದೇವರು ಸರ್ವವ್ಯಾಪಿ, ನನ್ನ ಆತ್ಮವಾದರೂ ದೇವರೇ " ಇಂಥ ಉಪದೇಶಗಳು ಭಾರತದಲ್ಲಿ ಬೆಳೆದುಬಂದ ಅನೇಕಾನೇಕ ಧರ್ಮ ಮತ ಪಂಥಗಳ ತಳಹದಿಯಾಗಿವೆ

ಇವಲ್ಲದೆ ಉಪವೇದಗಳೆಂದು ಷಡಂಗಗಳೆಂದು ಬೇರೆ ಗ್ರಂಥಗಳಿವೆ.

### ದಕ್ಷಿಣಾಪಥ ಪ್ರವೇಶ:—

ಆರ್ಯರು ಕ್ರಮಶಃ ತಂಡ ತಂಡವಾಗಿ ಬಂದು ಉತ್ತರ ಹಿಂದುಸ್ತಾನದಲ್ಲಿ ನೆಲಿಸಿ ಬೇರೂರಿ ನಿಂತ ಬಳಿಕ ದಕ್ಷಿಣದ ಕಡೆಗೂ ಕಾಲು ಚಾಚಿದರು ಅಲ್ಲಿ ಮತ್ತೆ ಮೂಲನಿವಾಸಿಗಳ ಕೂಡ ಯುದ್ಧ ಮಾಡಿದರು. ಅವರನ್ನು ಜಯಿಸಿ ಅವರ ಮೇಲೆ ತಮ್ಮ ಪ್ರಭಾವ ಬೀರಿದರು ಮೂಲನಿವಾಸಿಗಳ ಕೂಡ ಬೆರೆತರು. ಈ ರೀತಿ, ಆರ್ಯರು ಹೋದಹೋದಲ್ಲಿ ಮೂಲನಿವಾಸಿಗಳನ್ನು ಬೆರೆಸಿಕೊಂಡರಲ್ಲದೆ ಅವರನ್ನು ನಿರ್ಮೂಲ ಮ[illegible]

ಈಗ ಆರ್ಯರಲ್ಲಿ ಅರಸುತನವು ವಂಶಗತವಾಗಿ ನಡೆದು ಬಂದಿತು. ತಂದೆಯ ನಂತರ ಬಹುಶಃ ಮಗನು ಪಟ್ಟಕ್ಕೆ ಬಾಧ್ಯನೆನಿಸಿದನು. ಅರಸು ತನ್ನ ಪಟ್ಟಣ ಮತ್ತು ಅದರ ಸುತ್ತಲಿನ ಕೆಲವು ಪ್ರದೇಶಗಳನ್ನು ಮಾತ್ರ [illegible]ದನು ಈ ರೀತಿ ಒಂದು ಕಾಲಕ್ಕೆ ಉತ್ತರದ ಭಾರತದಲ್ಲಿ ಅನೇಕ ಕ್ಷುದ್ರ ರಾಜ್ಯಗಳಿದ್ದವು. ಕೋಸಲ, ವಿದೇಹ ಸಿಂಧು, ಮುಂತಾದವುಗಳನ್ನು ಉದಾಹರಿಸಬಹುದು. ಈ ಕಾಲಕ್ಕೆ ವರ್ಣಾಶ್ರಮ ಧರ್ಮಗಳು ಒಳ್ಳೇ ಪಕ್ಕಾಗಿ ಬೆಳೆದಿದ್ದರೂ, ರಾಜ್ಯಭಾರದ ದೃಷ್ಟಿಯಿಂದ ಪ್ರಜರೆಲ್ಲ ರಾಜನ ಮಕ್ಕಳೆನಿಸಿದರು. ಪ್ರಜೆರಲ್ಲಿಯ ಮಹತ್ವದ ವ್ಯಕ್ತಿಗಳನ್ನೂ, ಕೆಳದರ್ಜೆಯ ಪ್ರಜೆರನ್ನೂ ಅರಸನು ಒಂದೇ ದೃಷ್ಟಿಯಿಂದ ನೋಡುತ್ತಿದ್ದನು. ಮನುಷ್ಯನಲ್ಲಿ ಸಹಜವಾಗಿ ನೆಲೆಸಿದ ಪಿತೃಪ್ರೇಮ, ಬಂಧುಪ್ರೇಮ, ಸತ್ಯಸಂಧತೆ, ನಿಯಮ ಪಾಲನೆಗಳು ಈ ಕಾಲದಲ್ಲಿ ಜನರಲ್ಲಿ ಹರಡಿ ಜೀವನವು ಭದ್ರವಾದ ತಳಹದಿಯ ಮೇಲೆ ನೆಲಿಸಿದ್ದಿತು. ಸ್ತ್ರೀಯರು ಪುರುಷರ ಸಮಾನರೆನಿಸಿ ಸಮಾಜದಲ್ಲಿ ಮೇಲಾದ ಗೌರವವನ್ನು ಪಡೆದರು.

**ಪುರಾಣಗಳು:—**

ವೇದವಾಙ್ಮಯವು ರಚಿತವಾದ ನಂತರ ಎಷ್ಟೋ ಕಾಲ ಕಳೆದ ಬಳಿಕ ಸ್ಮೃತಿ, ಸೂತ್ರ ಗ್ರಂಥಗಳು ರಚಿತವಾದವು * ಈ ಮಧ್ಯಂತರ ಕಾಲದಲ್ಲಿ ಇಂದು ನಾವು ಪುರಾಣಗಳೆಂದು ಕರೆಯುವ ಗ್ರಂಥಗಳಲ್ಲಿ ಹೇಳಿದ ಸಂಗತಿಗಳು ನಡೆದು ಹೋದವೆಂದು ಹೇಳಿಕೆಯಿದೆ. ಆ ನಂತರ ನೂರಾರು ವರ್ಷಗಳು ಕಳೆದ ಬಳಿಕ ಪುರಾಣಗಳು ರಚಿತವಾದವು† ಇವು ಒಟ್ಟಿನಲ್ಲಿ ೧೮ ಇದ್ದು, ಪ್ರತಿಭಾರತೀಯನಿಗೆ ಅರಿಕೆಯಿದ್ದ ಪುರಾಣಗಳೆಂದರೆ, ರಾಮಾಯಣ-ಮಹಾಭಾರತಗಳು. ಆದಿಕಾವ್ಯವಾದ ರಾಮಾಯಣವನ್ನು ಆದಿಕವಿಯಾದ ವಾಲ್ಮೀಕಿಯು ರಚಿಸಿದನು ಮಹಾಭಾರತವು ವ್ಯಾಸರಿಂದ ಬರೆಯಲ್ಪಟ್ಟಿತು.

**ರಾಮಾಯಣ ಕಥಾಸಾರ:—**

ಒಂದಕ್ಕ ಅಯೋಧ್ಯಾ ನಗರದಲ್ಲಿ ದಶರಥನೆಂಬ ಅರಸು ರಾಜ್ಯವಾಳುತ್ತಿದ್ದನು ಅವನಿಗೆ ಮೂರು ಮಂದಿ ಹೆಂಡಿರು. ದಶರಥನು ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ಕು ಮಕ್ಕಳನ್ನು ಪಡೆದನು ಇವರಲ್ಲಿ ಹಿರಿಯನಾದ ರಾಮನಿಗೆ ದಶರಥನು ಯುವರಾಜ ಪದವನ್ನು ಕೊಡಲು ಹವಣಿಸಿದಾಗ, ನಡುವಿನ ಹೆಂಡತಿಯಾದ ಕೈಕೇಯಿಯು, ತನ್ನ ಹೊಟ್ಟೆಯ ಮಗನಾದ ಭರತನಿಗೆ ಆ ಪದವನ್ನು ಕೊಡಬೇಕೆಂದೂ, ಶ್ರೀರಾಮನನ್ನು ೧೪ ವರ್ಷ ಅಡವಿಗೆ ಅಟ್ಟಬೇಕೆಂದೂ ಹಟ ಹಿಡಿದಳು. ಇದಕ್ಕೆ ಮೊದಲು ಅವಳಿಗೆ ಕೊಟ್ಟ ವಚನದ ಬಲೆಯೊಳಗೆ ಶಿಲುಕಿದ ದಶರಥನು ರಾಮನನ್ನು ಅಡವಿಗಟ್ಟಬೇಕಾಯಿತು ರಾಮನು ತಮ್ಮನಾದ ಲಕ್ಷ್ಮಣ ಮತ್ತು ಹೆಂಡತಿಯಾದ ಸೀತಾದೇವಿಯರಿಂದೊಡಗೂಡಿ ಅಡವಿಗೆ ಹೋದನು ಇತ್ತ ದಶರಥನು ಪುತ್ರವ್ಯಥೆಯಿಂದ ಮರಣ ಹೊಂದಿದನು ಭರತನು ರಾಜನಾಗಲು ಒಪ್ಪದೆ, ರಾಮನ ಪಾದುಕೆಗಳನ್ನು ಸಿಂಹಾಸನದ ಮೇಲಿರಿಸಿ ರಾಜ್ಯಭಾರ ನಡೆಸಿದನು.

* ಸುಮಾರು ಕ್ರಿ. ಪೂ. ೧೦೦೦ ದಿಂದ ೮೦೦ ರ ಶತಮಾನಗಳಲ್ಲಿ ಎಂದು ಊಹೆಯದೆ.

† ಸುಮಾರು ೮೦೦ ರಿಂದ ೬೦೦ ವರೆಗೆ.

ವನವಾಸದಲ್ಲಿ ಶ್ರೀರಾಮಚಂದ್ರನು ಈಗಿನ ನಾಸಿಕದ ಹತ್ತಿರ ಪಂಚ-
ವಟಿ ಎಂಬಲ್ಲಿ ವಾಸವಾಗಿದ್ದನು. ಆ ಕಾಲಕ್ಕೆ ಈ ಪ್ರದೇಶವೆಲ್ಲ ಅರಣ್ಯ
ವಾಗಿದ್ದು, ಅಲ್ಲಲ್ಲಿ ರಾಕ್ಷಸರು ತುಂಬಿದ್ದರು. ದಕ್ಷಿಣಕ್ಕೆ ದೂರದಲ್ಲಿ ಲಂಕಾ
ದ್ವೀಪದಲ್ಲಿ ರಾಕ್ಷಸರ ಬಲಾಢ್ಯವಾದ ರಾಜ್ಯವಿತ್ತು. ಅದರ ಅರಸನಾದ
ರಾವಣನು ಮೋಸದಿಂದ ಸೀತೆಯನ್ನು ಕದ್ದೊಯ್ದನು. ಆವಳನ್ನು ಹುಡು
ಕುತ್ತ ರಾಮಲಕ್ಷ್ಮಣರು ಈಗಿನ ಹಂಪಿಯ ನೆರೆಯಲ್ಲಿದ್ದ ಕಿಷ್ಕಿಂಧಾ ಎಂಬ
ನಗರಕ್ಕೆ ಬಂದರು. ಅಲ್ಲಿ ವಾನರರು ರಾಜ್ಯವಾಳುತ್ತಿದ್ದರು. ಶ್ರೀರಾಮನಿಗೆ
ಸೀತೆಯನ್ನು ಶೋಧಿಸುವ ಕಾರ್ಯದಲ್ಲಿ ವಾನರರು ಸಹಾಯ ಸಲ್ಲಿಸಿದರು.
ಅವರ ಮುಖಂಡರಲ್ಲೊಬ್ಬನಾದ ಹನುಮಂತನೆಂಬಾತನು ಸಮುದ್ರವನ್ನು
ದಾಟಿ ಲಂಕೆಗೆ ಹೋಗಿ ಸೀತೆಯನ್ನು ಕಂಡುಹಿಡಿದನು. ಮತ್ತು ಆಕೆಯ
ಗುರುತನ್ನೊಂದು ರಾಮನಿಗೆ ತಂದೊಪ್ಪಿಸಿದನು. ರಾಮನು ವಾನರ ಸೇನೆ
ಯಿಂದೊಡಗೂಡಿ, ಲಂಕೆಯ ವರೆಗೆ ಸೇತುವೆಯನ್ನು ಕಟ್ಟಿಸಿ, ಸಮುದ್ರವನ್ನು
ದಾಟಿ ಲಂಕಾಧಿಪತಿಯ ಕೂಡ ಯುದ್ಧ ಹೂಡಿದನು. ಈ ಕಾಳಗದಲ್ಲಿ
ರಾವಣನು ಸೋತು ಮಡಿದನು. ರಾಕ್ಷಸರಿಂದ ಒಡೆದು ರಾಮನ ಕಡೆಗೆ
ಬಂದ ವಿಭೀಷಣನಿಗೆ ಲಂಕಾಧಿಪತ್ಯವನ್ನು ಕೊಟ್ಟು ಸೀತಾಸಮೇತರಾಗಿ ಶ್ರೀ
ರಾಮಲಕ್ಷ್ಮಣರು ಅಯೋಧ್ಯೆಗೆ ಮರಳಿದರು

ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುತ್ತಿರಲು ರಾವಣನ ವಶದಲ್ಲಿದ್ದ
ಸೀತೆಯ ವಿಷಯಕ್ಕಾಗಿ ಜನರು ಆಡಿಕೊಳ್ಳುವದನ್ನು ಶ್ರೀರಾಮನು ಕೇಳಿ
ಮಡದಿಯನ್ನು ಅಡವಿಗಟ್ಟಿದನು. ಸೀತೆಯು ಅರಣ್ಯದಲ್ಲಿ ವಾಲ್ಮೀಕಿಯ
ಆಶ್ರಮದಲ್ಲಿ ತಂಗಿದಳು. ಅಲ್ಲಿ ಅವಳು ಕುಶಲವರೆಂಬ ಅವಳಿ ಮಕ್ಕಳನ್ನು
ಹೆತ್ತಳು. ಇತ್ತ ರಾಮನು ಅಶ್ವಮೇಧ ಯಜ್ಞವನ್ನು ಮಾಡಿ ಕುದುರೆಯನ್ನು
ಬಿಡಲು ಅದು ಸುತ್ತಾಡುತ್ತ ವಾಲ್ಮೀಕಿಯ ಆಶ್ರಮಕ್ಕೆ ಬಂದಿತು. ಕುಶ
ಲವರು ಅದನ್ನು ಕಟ್ಟಿಹಾಕಿ ರಾಮನೊಡನೆ ಯುದ್ಧಕ್ಕೆ ಅಣಿಯಾದರು.
ಸ್ವತಃ ಶ್ರೀರಾಮನೇ ರಣರಂಗಕ್ಕೆ ಬಂದು ಕುಶಲವರ ಯುದ್ಧಕೌಶಲ್ಯಕ್ಕೆ
ಬೆರಗಾದನು. ಸೀತೆಯಿಂದ ಎಲ್ಲವೂ ಪರಿಷ್ಕಾರವಾದ ಬಳಿಕ ಮಕ್ಕಳೊಂ-
ದಿಗೆ ರಾಮನು ಅಯೋಧ್ಯೆಗೆ ತೆರಳಿದನು. ಸೀತೆಯು ಮಾತ್ರ ಭೂಗರ್ಭ

ವನ್ನು ಸೇರಿದಳು. ರಾಮನು ತನ್ನ ಅವಸಾನ ಕಾಲಕ್ಕೆ ಸರಯೂ ನದಿಯಲ್ಲಿ ಧುಮುಕಿ ಪ್ರಾಣ ಬಿಟ್ಟನು.

ರಾಮಾಯಣದ ಸಂಗತಿಗಳ ಬಗ್ಗೆ ಐತಿಹಾಸಿಕ ದೃಷ್ಟಿಯಿಂದ ಎಷ್ಟೇ ವಾದವಿದ್ದರೂ, ಉತ್ತರದಲ್ಲಿಯ ಆರ್ಯರು ದಕ್ಷಿಣದೊಳಗಿನ ಜನಾಂಗಗಳನ್ನು ಜಯಿಸಿ, ತಮ್ಮೊಡನೆ ಬೆರಕೆ ಮಾಡಿಕೊಂಡರೆಂಬುದು ಇವರಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ

ಮಹಾಭಾರತ ಕಥಾಸಾರ:—

ಪೂರ್ವಕಾಲದಲ್ಲಿ ಇಂದ್ರಪ್ರಸ್ಥವೆಂಬ ನಗರದಲ್ಲಿ ಪಾಂಡುರಾಜನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವನ ಮರಣದ ನಂತರ ಹಸ್ತಿನಾವತಿಯಲ್ಲಿದ್ದ ಅವನ ಬಾಂಧವರು ರಾಜ್ಯಕ್ಕಾಗಿ ಆಸೆಬಟ್ಟರು. ಪಾಂಡುರಾಜನ ಮಕ್ಕಳು ಧರ್ಮ, ಭೀಮ, ಅರ್ಜುನ, ನಕುಲ, ಸಹದೇವರೆಂದು ಐವರು. ಹಸ್ತಿನಾವತಿಯಲ್ಲಿದ್ದ ಅವರ ಪ್ರಬಲಶಕ್ತಿಗಳಾದ ಬಾಂಧವರಿಗೆ ಕೌರವರೆಂಬ ಹೆಸರು. ಅವರು ೧೦೦ ಮಂದಿ ಇದ್ದರು. ಅವರಲ್ಲಿ ದುರ್ಯೋಧನನು ಹಿರಿಯ. ಪಾಂಚಾಲರಾಜನ ಪುತ್ರಿಯಾದ ದ್ರೌಪದಿಯನ್ನು ಪಾಂಡವರು ಮದುವೆಯಾಗಿದ್ದರು. ಅರ್ಜುನನು ಕೃಷ್ಣನ ತಂಗಿಯಾದ ಸುಭದ್ರೆಯನ್ನೂ ಪರಿಗ್ರಹಿಸಿದ್ದನು. ಪಾಂಡವರು ಮಗಧರಾಜನಾದ ಜರಾಸಂಧನನ್ನು ಸೋಲಿಸಿ ರಾಜಸೂಯ ಯಜ್ಞವನ್ನು ಮಾಡಿದರು. ಇವರ ಘನತೆಯನ್ನು ಸಹಿಸಲಾರದೆ, ದುರ್ಯೋಧನನು ದುರ್ಬುದ್ಧಿಯಿಂದ ಇವರನ್ನು ದ್ಯೂತಕ್ಕೆ ಕರೆದನು. ದ್ಯೂತದಲ್ಲಿ ಮೋಸದಿಂದ ಪಾಂಡವರನ್ನು ಸೋಲಿಸಿ, ಅವರ ರಾಜ್ಯವನ್ನು ಕಸಿದುಕೊಂಡು, ದ್ರೌಪದಿಯನ್ನು ತುಂಬಿದ ಸಭೆಯಲ್ಲಿ ಅವಮಾನಗೊಳಿಸಿ, ಕೌರವರು ಪಾಂಡವರನ್ನು ೧೨ ವರ್ಷ ವನವಾಸ, ಮತ್ತು ೧ ವರ್ಷ ಅಜ್ಞಾತವಾಸಕ್ಕೆಂದು ಅಡವಿಗಟ್ಟಿದರು. ವನವಾಸದಲ್ಲಿ ಪಾಂಡವರು ತಮ್ಮ ಪ್ರಭಾವದಿಂದ ಪರರಾಜರನ್ನು ತಮ್ಮ ಕಡೆಗೆ ಒಲಿಸಿಕೊಂಡರು. ಅಜ್ಞಾತವಾಸದಲ್ಲಿ ದಕ್ಷಿಣದಲ್ಲಿ ರಾಜ್ಯವಾಳುತ್ತಿದ್ದ ವಿರಾಟನ ನಗರದಲ್ಲಿ ತಂಗಿದರು.

ತಿರುಗಿ ಬಂದ ಮೇಲೆ ಕೌರವೇಶನು ಪಾಂಡವರಿಗೆ ಅವರ ರಾಜ್ಯವನ್ನು ಕೊಡದಾದನು. ಶ್ರೀಕೃಷ್ಣನು ಸಂಧಾನ ನಡೆಸಿದನು. ಆದರೆ ಅದು

ವಿಫಲವಾಯಿತು. ಅನಿವಾರ್ಯವಾಗಿ ಪಾಂಡವರು ಯುದ್ಧ ಹೂಡಬೇಕಾಯಿತು. ಇದುವೆ ಭಾರತ ಯುದ್ಧ.* ವ್ಯಾಸರು ಹಾಡಿದ ಕುರುರಂಗದ ಕಹಳೆ!

ಈ ಯುದ್ಧದಲ್ಲಿ ಶ್ರೀಕೃಷ್ಣನು ಅರ್ಜುನನ ಸಾರಥಿಯಾಗಿದ್ದನು. ಸೇನಗಳ ನಡುವೆ ನಿಂತು ಅರ್ಜುನನು ಹೇಡಿಯಂತೆ ತನ್ನಿಂದ ಕಾಳಗ ನಡೆಸುವದಾಗದೆನ್ನಹತ್ತಿದನು. ಆಗ ಕೃಷ್ಣನು ಆತನಿಗೆ ಕರ್ತವ್ಯ ಕರ್ಮದ ಅರಿವು ಮಾಡಿಕೊಟ್ಟು, ಯುದ್ಧಕ್ಕೆ ಅಣಿಮಾಡಿದನು. ಇದುವೆ ಭಗವದ್ಗೀತೆಯು. ಈ ಯುದ್ಧವು ಮುಂದೆ ೧೮ ದಿವಸ ಸಾಗಿತು ಕೃಷ್ಣನ ಚಾತುರ್ಯದಿಂದ ಕೌರವರೆಲ್ಲರೂ ಹತರಾದರು. ಈ ರೀತಿಯಾಗಿ ಪಾಂಡವರು ವಿಜಯಿಗಳಾಗಿ ಹಸ್ತಿನಾವತಿಯ ಪಟ್ಟವನ್ನೇರಿದರು ಕೆಲಕಾಲ ಧರ್ಮರಾಜನು ಧರ್ಮದಿಂದ ರಾಜ್ಯ ನಡಿಸಿ, ಕೊನೆಗೆ ಸಪತ್ನೀಕನಾಗಿ, ಬಾಂಧವರೊಡನೆ ಸ್ವರ್ಗವನ್ನೇರಿದನಂತೆ.

ಏನಿದ್ದರೂ, ವೈದಿಕ ಸಂಸ್ಕೃತಿಯ ಶಿಖರವಾದ ಪುರಾಣಕಾಲದ ವೈಭವವೆಲ್ಲ ಕುರುಕ್ಷೇತ್ರದ ಯುದ್ಧದಿಂದ ಹಾಳಾಯಿತೆನ್ನಬಹುದು.

ರಾಮಾಯಣ ಮಹಾಭಾರತಗಳಲ್ಲಿ ಒಡಮೂಡುವ ವ್ಯಕ್ತಿಗಳೆಂದರೆ- ರಾಮನು ಮತ್ತು ಶ್ರೀಕೃಷ್ಣನು ಇವರು ದೇವರ ಅವತಾರವೆಂದು ಇಂದಿನ ವರೆಗೂ ಪೂಜಗೊಳ್ಳುತ್ತಾರೆ ಆಯಾ ಕಾಲದಲ್ಲಿ ಸಮಾಜದ ಆದರ್ಶ ಗುಣಗಳನ್ನು ಎತ್ತಿ ತೋರಿಸುವ ವ್ಯಕ್ತಿಗಳಿವರು. ಪಿತೃವಾಕ್ಯ ಪರಿಪಾಲನೆ, ಕಷ್ಟ ಸಹಿಷ್ಣುತೆ, ಏಕಪತ್ನೀವ್ರತ, ದುಷ್ಟದಮನ-ಶಿಷ್ಟ ಪರಿಪಾಲನೆ ರಾಮನ ಕಾಲದ ಸಮಾಜದಲ್ಲಿ ಮೆಚ್ಚಿಗೆಯ ಗುಣಗಳಾಗಿದ್ದವು ರಾಜಕಾರಣ, ಕರ್ತವ್ಯ ಪಾಲನೆ, ಲೋಕಸಂಗ್ರಹ, ಭವ್ರತ ಇವು ಶ್ರೀಕೃಷ್ಣನ ಕಾಲದ ಆದರ್ಶ ಗುಣಗಳಾಗಿದ್ದವು

## ಪ್ರಶ್ನಾವಲಿ—

(೧) ಪುರಾಣಕಾಲದ ಸಂಸ್ಕೃತಿಯು ಈಗ ಎಷ್ಟರ ಮಟ್ಟಿಗೆ ಉಳಿದಿರುವದು?
(೨) "ರಾಮರಾಜ್ಯ"ದ ಕಲ್ಪನೆಯನ್ನು ಅರಿತುಕೊಳ್ಳಿರಿ.
(೩) ಶ್ರೀರಾಮ ಕೃಷ್ಣರ ವ್ಯಕ್ತಿತ್ವವನ್ನು ಹೋಲಿಸಿರಿ.
(೪) ಆರ್ಯ ಅನಾರ್ಯ ಸಂಕಲನದ ಹೆಗ್ಗುರುತುಗಳನ್ನು ಹೇಳಿರಿ.

*ಕ್ರಿ. ಪೂ. ೧೪೩೦ ರಲ್ಲಿ ಎಂದು ತಜ್ಞರ ಎಣಿಕೆಯಿದೆ.

# ೫ ವಿಚಾರಕ್ರಾಂತಿ

ಕ್ರೈ. ಪೂ. ೭ನೇ ಶತಮಾನವು ಜಗತ್ತಿನ ವಿಚಾರ ತರಂಗದಲ್ಲಿ ಒಂದು ಕ್ರಾಂತಿಕಾಲ. ಬಹುತರ ಜಗತ್ತಿನ ಮಹದ್ವಿಭೂತಿಗಳೂ, ಮಹದಾಚಾರಗಳೂ, ಈಗ ಬೆಳೆದು ಒದುಕಿದವು. ಅದೇ ಕಾಲಕ್ಕೆ ಹಿಂದುಸ್ಥಾನದಲ್ಲಿಯೂ ಕೂಡ ವಿಚಾರಗಳಲ್ಲಿ ಕ್ರಾಂತಿಯಾಗದೆ ಇರಲ್ಲಿಲ್ಲ ಮಗಧ ದೇಶವು ಈ ಕ್ರಾಂತಿಯನ್ನು ಹೂಡಿತು. ಮೊದಲಿನಿಂದಲೂ ಈ ದೇಶವು ಆರ್ಯಸಂಸ್ಕೃತಿಗೆ ವಿರೋಧಿಯಾಗಿದ್ದಿತು. ಕ್ರಿ. ಪೂ ೬-೭ ನೇ ಶತಮಾನಗಳಲ್ಲಿ ಜೈನ ಬೌದ್ಧ ಮತಗಳು ತಲೆದೋರಿ ಆರ್ಯಸಂಸ್ಕೃತಿಗೆ, ವೈದಿಕ ಮತಕ್ಕೆ, ಮುಖ್ಯತಃ ಬ್ರಾಹ್ಮಣರ ಔದ್ಧತ್ಯಕ್ಕೆ ಬಲವಾದ ವಿರೋಧ ತೋರಿದವು. ವೈದಿಕ ಮತದ ವಿರೋಧಿಯಾದ ಇಂಥ ಮತಗಳು ಆಗಿನ ಕಾಲದಲ್ಲಿ ೬೩ ಕ್ಕೆ ಮೇಲ್ಪಟ್ಟು ಇದ್ದವೆಂದು ಒಂದು ಹಳೆ ಬುದ್ಧ ಗ್ರಂಥದಲ್ಲಿ ಹೇಳಿದೆ

**ಬುದ್ಧದೇವನು:—**

ಎಂದಿನಿಂದಲೂ ಮಗಧವು ವೈದಿಕ ಧರ್ಮಕ್ಕೆ ವಿರೋಧಿಯಾಗಿತ್ತು. ಇದರ ಪರಿಣಾಮವಾಗಿಯೇ ಬೌದ್ಧ ಧರ್ಮವು ತಲೆದೋರಿತು. ಬುದ್ಧನ ಜನ್ಮಸ್ಥಳ ಕಪಿಲವಸ್ತು. ಇವನ ತಂದೆಯ ಹೆಸರು ಶುದ್ಧೋದನ. ಮಾಯಾದೇವಿಯು ಇವನ ತಾಯಿ. ಕ್ರೈ. ಪೂ. ೫೬೮ ರಲ್ಲಿ ಜನ್ಮವೆತ್ತಿದನು. ಯಶೋಧರೆಯೆಂಬಾಕೆಯು ಈತನ ಹೆಂಡತಿ. ಇವನಿಗೆ ರೋಹಿಲನೆಂಬ ಒಬ್ಬ ಮಗನಿದ್ದನು.

ಮಗನು ಹುಟ್ಟಿ ೬ ವರ್ಷಗಳಾದ ಮೇಲೆ ಗೌತಮನಿಗೆ ತತ್ತ್ವಾಸಕ್ತಿಯಾಗಿ ಸಂಸಾರತ್ಯಾಗ ಮಾಡಿದನು. ಸನ್ಯಾಸಿಯಾಗಿ ಉರುವೇಲ ಎಂಬ ಕಾನನದಲ್ಲಿ ತಪಸ್ಸು ಮಾಡಿದನು. ಗಂಗೆಯ ಬಳಿಯಲ್ಲಿ ಒಮ್ಮೆ ತಪಸ್ಸಿಗೆ ಕುಳಿತಾಗ ಇವನು ಹುಡುಕುತ್ತಿದ್ದ ತತ್ತ್ವ ತಿಳಿಯಿತು. ಜಗತ್ತಿನ ದುಃಖದ ಕಾರಣ ಅಹಂಕಾರ ಮತ್ತು ಮಮತೆಗಳು. ದುಃಖಸಂಕಟಗಳಿಂದ ಪಾರಾಗಲು ಅಹಂಕಾರವನ್ನೂ, ಆಶೆಯನ್ನೂ ಬಿಡಬೇಕಲ್ಲದೆ, ದೇಹದಂಡನೆಯನ್ನು

ಮಾಡಬಾರದೆಂದು ಈತನು ಬೋಧಿಸಿದನು. ದೇಹದಂಡನೆಯಿಂದ ಅಥವಾ ವಿಜೃಂಭಣೆಯ ಯಜ್ಞಗಳಿಂದ ಮೋಕ್ಷ ಸಾಧಿಸಲಾರದೆಂದು ಈತನ ತಿಳವಳಿಕೆ. ಯಜ್ಞಗಳನ್ನು ಖಂಡಿಸುತ್ತ ಈತನು ಅಹಿಂಸಾ ತತ್ವವನ್ನೂ, ನೀತಿಪ್ರಧಾನವಾದ ಆಚಾರವನ್ನೂ ಬೋಧಿಸಿದನು.

ಈ ಬೋಧೆಯು ಕೀಳು ಜನರಲ್ಲಿಯೂ, ಅಜ್ಞರಲ್ಲಿಯೂ ಬೇರೂರಿತು. ಯಾಕಂದರೆ ಅವರಲ್ಲಿ ಅಮಿತವಾದ ದಯೆಯನ್ನು ತೋರಿದನಲ್ಲದೆ, ಅವರಿಗೆ ತಿಳಿಯುವ ಪಾಲೀ ಭಾಷೆಯಲ್ಲಿಯೇ ಇವನು ಬೋಧಿಸಿದನು.

ವಾರಣಾಸಿ, ರಾಜಗೃಹ, ಕಪಿಲವಸ್ತು, ಶ್ರಾವಸ್ತಿ, ವೈಶಾಲಿ, ಅಂಗ, ಮಗಧ, ಕೋಸಲ, ವಿದೇಹ ರಾಷ್ಟ್ರಗಳಲ್ಲಿ ಈ ಧರ್ಮವು ಈತನಿರುವಾಗಲೆ ಹಬ್ಬಿತು.

ಕುಶಿ ನಗರದಲ್ಲಿ ಕ್ರಿ. ಪೂ. ೫೦೧ ರಲ್ಲಿ ಈತನು ಪರಿನಿರ್ವಾಣವನ್ನು ಹೊಂದಿದನು.

**ಮಹಾವೀರನು:—**

ಈಗಿನ ಆಸಾಮದ ಉತ್ತರ ಭಾಗದಲ್ಲಿ ಆಗಿನ ಕಾಲಕ್ಕಿದ್ದ ವೈಶಾಲಿ ಎಂಬ ನಗರದಲ್ಲಿ ಜಿನ ಅಥವಾ ವರ್ಧಮಾನನೆಂಬವನು ಕ್ರಿ. ಪೂ. ೫೯೯ ರಲ್ಲಿ ಹುಟ್ಟಿದನು. ತಂದೆ ಸಿದ್ಧಾರ್ಥನೆಂಬಾತನು. ತಾಯಿ ತ್ರಿಶಿಲಾ. ಹೆಂಡತಿ ಯಶೋದಾ. ಕೆಲಕಾಲ ಬಾಳ್ವೆ ಮಾಡಿದ ಬಳಿಕ, ಈತನಿಗೆ ತತ್ವಾಸಕ್ತಿ ಯುಂಟಾಯಿತು. ಸಂಸಾರ ತ್ಯಾಗ ಮಾಡಿ ಸನ್ಯಾಸಿಯಾದ. ಪಾರ್ಶ್ವನಾಥನೆಂಬ ಗುರುವನ್ನು ಆಶ್ರಯಿಸಿದನು. ಇವನ ಉಪದೇಶದಿಂದ ತೃಪ್ತನಾಗದೆ ಹೊರ ಹೊರಟು, ಮಗಧ, ವಿದೇಹ, ಅಂಗ ರಾಷ್ಟ್ರಗಳಲ್ಲಿ ೧೨ ವರ್ಷ ಸಂಚರಿಸಿದನು. ಈ ಕಾಲದಲ್ಲಿ ಇವನಿಗೆ ಕೆಲವರು ಶಿಷ್ಯರಾದರು. ವರ್ಧಮಾನನು ಈ ಶಿಷ್ಯರನ್ನೆಲ್ಲ ಕಲೆಹಾಕಿ, ಸಂಘವನ್ನಾಗಿ ಸ್ಥಾಪಿಸಿದನು. ಇದಕ್ಕೆ ಮೂಲ ಸಂಘವೆಂಬ ಹೆಸರು.

ವರ್ಧಮಾನನು ತತ್ವೋಪದೇಶ ಮಾಡುತ್ತಾ ಪಾಟಲೀಪುತ್ರದಲ್ಲಿ ಕ್ರಿ. ಪೂ. ೫೨೭ ರಲ್ಲಿ ಕೈವಲ್ಯ ಪಡೆದನು. ಇವನಿಗೆ ಮಹಾವೀರನೆಂದೂ, ಜಿನನೆಂದೂ ಕರೆದರು.

## ಜೈನ ಮತದ ತತ್ವಗಳು —

(೧) ಜಗತ್ತು ದೇವನೊಬ್ಬನಿಂದ ಸೃಷ್ಟವಾಗಿಲ್ಲ.

(೨) ಜಗತ್ತಿನ ನಿರ್ಮಾಣಕ್ಕೆ ಪ್ರಕೃತಿ ಮತ್ತು ಆತ್ಮಗಳೆಂಬ ಎರಡು ತತ್ವಗಳು ಬೇಕು.

(೩) ಕರ್ಮಬಲದಿಂದ ಆತ್ಮವು ಪ್ರಕೃತಿಯಲ್ಲಿ ಬಂಧಿತವಾಗಿ ಜನ್ಮಾಂತರವನ್ನು ತಾಳುವದು.

(೪) ಈ ಬಂಧನದಿಂದ ಪಾರಾಗುವದೇ ಮೋಕ್ಷ.

(೫) ಅಹಿಂಸೆಯಿಂದ ಕರ್ಮ ಮಾಡಬೇಕು

(೬) ಗಿಡ, ಮರ, ಕಲ್ಲು, ನೀರುಗಳಿಗೂ ಪ್ರಾಣವಿದೆ.

(೭) ಕೈವಲ್ಯ ಸಾಧಕನು ನಿಜವಾದ ಜ್ಞಾನ ಪಡೆಯಬೇಕು.

(೮) ಶ್ರದ್ಧೆ, ಭಕ್ತಿ, ಸತ್ಯಗಳನ್ನು ಬಿಡಬಾರದು.

(೯) ಅಂತಃಕರಣ ಶುದ್ಧಿಗೆ ತಪಸ್ಸು ಅವಶ್ಯ.

(೧೦) ಸಲ್ಲೇಖನ ವ್ರತ—ಅನ್ನ ನೀರಿಲ್ಲದೇ ದೇಹ ಬಿಡುವದು—ಯತಿಗಳಿಗೆ ಯೋಗ್ಯ.

## ಜೈನ ಮತದ ಪ್ರಸಾರ:—

ಉತ್ತರದಲ್ಲಿ ಕೋಸಲ, ವಿದೇಹ, ಮಗಧ, ಅಂಗಗಳಲ್ಲಿ ಅನೇಕ ಶಿಷ್ಯರಿದ್ದರು. ಇವರಿಂದ ಮತವು ಇವನ ಜೀವಾವಧಿಯಲ್ಲಿ ಬಹಳ ಹಬ್ಬಿತು.

ಮೌರ್ಯ ಚಂದ್ರಗುಪ್ತನು ಜೈನನಾಗಿ ದಕ್ಷಿಣದಲ್ಲಿ ಜೈನಯತಿ ಭದ್ರಬಾಹುವಿನೊಡನೆ ಬಂದು ಶ್ರವಣಬೆಳಗೊಳದೊಳಗೆ ತಪಸ್ಸು ನಡಿಸಿ ಅಲ್ಲಿಯೇ ದೇಹಬಿಟ್ಟನು. ಇವನ ಶಿಷ್ಯರು ಪುನ್ನಟ, ಪಾಂಡ್ಯ, ಚೋಳ ದೇಶಗಳಿಗೆ ಹೋಗಿ ಮತಬೋಧನೆಯನ್ನು ಮಾಡಿದರು. ಈಗ್ಯೂ ಶ್ರವಣಬೆಳಗೊಳವು ಜೈನರಿಗೆ ಯಾತ್ರಾಸ್ಥಾನವಾಗಿದೆ.

ಇವರಲ್ಲಿ ಶ್ವೇತಾಂಬರರು, ದಿಗಂಬರರೆಂಬ ಭೇದಗಳಿವೆ. ಮತಪ್ರಸಾರಕ್ಕೆ ಹೋದಾಗ, ಬೇರೆ ದೇಶಗಳ ಭಾಷೆಗಳನ್ನೂ, ಕಲೆಗಳನ್ನೂ ಇವನ ಶಿಷ್ಯರು ಕಲಿತರು. ಪ್ರಾಯಶಃ ಸಂಸ್ಕೃತವನ್ನೇ ಉಪಯೋಗಿಸಿದರು.

**ಸರದಸ್ತ:—**

ಏಶಿಯಾಖಂಡದ ಪಶ್ಚಿಮ ಭಾಗಕ್ಕಿದ್ದ ಇರಾಣದಲ್ಲಿ ಸರದಸ್ತ ಅಥವಾ ಝೊರೊಸ್ಟ ಎಂಬ ತತ್ವಜ್ಞಾನಿಯು ಜನ್ಮವೆತ್ತಿ ಬೋಧೆಗೆ ಮೊದಲು ಮಾಡಿದನು. ಇರಾಣದಲ್ಲಿ ನೆಲೆಸಿದ ಆರ್ಯ ಕುಲಗಳು ಇವನ ಉಪದೇಶದಿಂದ ಹುರುಪುಗೊಂಡು, ತಮ್ಮ ತಮ್ಮೊಳಗೆ ಐಕ್ಯವನ್ನು ಸಾಧಿಸಿ, ಪಶ್ಚಿಮಕ್ಕಿದ್ದ ರಾಷ್ಟ್ರಗಳನ್ನು ಕೈವಶ ಮಾಡಿಕೊಳ್ಳಲು ಹೆಣಗಿದವು ಸರದಸ್ತನ ಉಪದೇಶದ ಪರಿಣಾಮವಾಗಿ ಆಗಿನ ಕಾಲದ ಇರಾಣಿ ಸಾಮ್ರಾಜ್ಯವೆಂಬುದು ತಲೆಯೆತ್ತಿ ಬೆಳಕಿಗೆ ಬಂದಿತು. ಇವನಿಂದಲೆ, ಇಂದು ಪಾರ್ಶಿ ಧರ್ಮವೆಂಬ ಧರ್ಮವು ಸ್ಥಾಪಿತವಾಯಿತು. ಸರದಸ್ತನ ಬೋಧೆಯು ಆರ್ಯರ ಪ್ರಾಚೀನ ಕಲ್ಪನೆಯಂತೆ ಪ್ರಕೃತಿಯನ್ನೆ ಪೂಜಿಸುವ ವಿಧಾನವನ್ನಿಟ್ಟುಕೊಂಡಿತು. ಇಂದಿಗೂ ಪಾರ್ಶಿ ಮತಸ್ಥರು ಅಗ್ನಿಯನ್ನೆ ತಮ್ಮ ಆರಾಧ್ಯ ದೇವತೆಯನ್ನಾಗಿಟ್ಟುಕೊಂಡು, ಅಗ್ನಿಯ ಗುಡಿಗಳನ್ನು ಕಟ್ಟಿರುವರು. ಕಾಲಗತಿಯಲ್ಲಿ ಪಾರ್ಶಿ ಮತಸ್ಥರು ತಮ್ಮ ದೇಶದಿಂದ ಹೊರಬೀಳಬೇಕಾಗಿ ಭಾರತದ ಪಶ್ಚಿಮ ದಂಡೆಯಲ್ಲಿಯ ಬಂದರಗಳಲ್ಲಿ ಕೆಲವರು ತಂಗಿದರು. ಈ ಕಾರಣದಿಂದ ಪಾರ್ಶಿಗಳು ಭಾರತದಲ್ಲಿ* ಕೆಲಮಟ್ಟಿಗೆ ಹರಡಿದ್ದಾರೆ

**ಕುಂಗ ಫುತ್ಸೆ:—**

ಏಶಿಯಾ ಖಂಡದ ಪೂರ್ವಭಾಗದ ಚೀನಾದೇಶದಲ್ಲಿಯೂ ಕೂಡ ಇದೇ ಕಾಲದಲ್ಲಿ ಕಾಂಫೂಷ್ ಅಥವಾ ಕುಂಗ ಫುತ್ಸ ಮತ್ತು ಲಾ ಉಟ್ಸೆ ಎಂಬವರು ಜನ್ಮವೆತ್ತಿ ನೀತಿ ಬೋಧೆಯನ್ನು ಮಾಡಿದರು. ಕುಂಗ ಫುತ್ಸೆ ಇವನು "ಲೂ" ಎಂಬ ಜಹಗೀರದಲ್ಲಿಯ ಸಾಮಾನ್ಯ ನೌಕರನ ಮಗನು. ತೀರ ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡು ತಬ್ಬಲಿಯಾದನು. ತಂದೆಯ ಹೆಜ್ಜೆಯನ್ನು ತುಳಿದು ತಾನೂ ಜಹಗೀರಿನಲ್ಲಿ ಸೇವಕನಾದನು. ಆದರೆ, ತನ್ನ ಸುತ್ತಲಿನ ಜನರು ಮಾಡುವ ಮೋಸ, ಅನ್ಯಾಯಗಳನ್ನು ಕಂಡು ಮನದಲ್ಲಿ ನೊಂದುಕೊಂಡನು. ಜನರ ಈ ವರ್ತನವನ್ನು ತಿದ್ದುವದಕ್ಕಾಗಿ ಒಂದು ವಿದ್ಯಾಮಂದಿರವನ್ನು ಪ್ರಾರಂಭಿಸಿದನು. ಕುಂಗ ಫುತ್ಸೆಯ ಸತ್ಯನಿಷ್ಠ

* ಇವರೊಳಗೆ ಬಹು ಜನರು ಮುಂಬಯಿಯಲ್ಲಿ ನೆಲೆಸಿದ್ದಾರೆ.

ನ್ಯಾಯನಿಷ್ಠೆಗಳು ಆತನನ್ನು ತರತರದ ಕಷ್ಟಕ್ಕೀಡುಮಾಡಿದವು. ತನ್ನ ೫೦ನೆಯ ವರ್ಷದಲ್ಲಿ ನ್ಯಾಯಾಧೀಶ ಮತ್ತು ಪ್ರಧಾನಪದವಿಗಳನ್ನು ಉಪಭೋಗಿಸಿದನು. ಮತ್ತೆ ಪದವಿಗಳು ಮಾಯವಾದವು. ಕುಂಗ ಫುತ್ಸೆಯು ತನ್ನ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ತೀರಿ ಕೊಂಡನು. ಚೀನೀಜನರು ಇವನನ್ನು ಇಂದಿಗೂ ಗುರುವೆಂದು ಪೂಜಿಸುತ್ತಾರೆ.

### ಸಾಕ್ರೇಟಿಸ:—

ಯುರೋಪ ಖಂಡದ ಗ್ರೀಸ ದೇಶವು ಪುರಾತನ ಸಂಸ್ಕೃತಿಗಾಗಿ ಹೆಸರಾದದ್ದು. ಕ್ರಿ. ಪೂ. ೫ನೆಯ ಮತ್ತು ೬ ನೆಯ ಶತಮಾನಗಳಲ್ಲಿ ಈ ದೇಶದಲ್ಲಿ ಮೇಲಾದ ವೈಚಾರಿಕ ಕ್ರಾಂತಿ ನಡೆಯಿತು. ಜಗತ್ತಿನಲ್ಲಿ ನಡೆಯುವ ಸಂಗತಿಗಳಿಗಾಗಿ ಸಾಂಪ್ರದಾಯ ರೀತಿಯಿಂದ ಕೊಡಲ್ಪಡುವ ಕಾರಣಗಳನ್ನು ಜನರು ನಂಬಲಾರದಾದರು. ಬುದ್ಧಿಯ ಪ್ರಾಮಾಣ್ಯವು ಬೆಳಕಿಗೆ ಬರಹತ್ತಿತು ಬುದ್ಧಿಯ ವರೆಗಲ್ಲಿಗೆ ಹತ್ತಲಾರದ ವಿಷಯಗಳನ್ನು ನಂಬಲು ಅಲ್ಲಗಳೆದವರಲ್ಲಿ ಸಾಕ್ರೆಟಿಸ್ ಎಂಬವನು ಹೆಸರು ಪಡೆದನು ಇವನು ಅಥೆನ್ಸ ಪಟ್ಟಣದಲ್ಲಿದ್ದನು. ಆಗಿನ ಕಾಲದ ಗ್ರೀಕ ತರುಣನ ಮುಂದೆ ನಿಸರ್ಗದ ಸಂಗತಿಗಳ ಸಲುವಾಗಿ ಇವನು ಪ್ರಶ್ನೆಗಳ ಸುರಿಮಳೆ ನಡಿಸುತ್ತಿದ್ದನು. "ತನ್ನರಿವು ತನಗೆ ಗುರುವು" ಎಂಬುದು ಇವನ ಉಪದೇಶ ತಿರುಳಾಗಿದ್ದಿತು. ಇವನ ವಿವೇಚನದ ಪ್ರಶ್ನೆಗಳಿಗೆ, ಪರಂಪರೆಯ ಅನುಸಾರಿಗಳಾದ ಸೋಫಿಸ್ಟ ಎಂಬ ತತ್ವಜ್ಞಾನಿಗಳು ಉತ್ತರ ಕೊಡಲಾರದವರಾಗುತ್ತಿದ್ದರು. ವಿರೋಧ ಮತ್ತು ದ್ವಿರುಕ್ತಿ ದೋಷಗಳಲ್ಲಿ ಎದುರಾಳಿಯನ್ನು ಕೆಡಹುವದರಲ್ಲಿ ಇವನು ಬಲು ಜಾಣ. 'ದೇವರು ಇದ್ದಾನೆಯೆ ? ಇದ್ದರೆ ಅವನು ಮನುಷ್ಯನ ಮೇಲೆ ಸತ್ತೆ ನಡಿಸಬಲ್ಲನೆ ? ನ್ಯಾಯವೆಂದರೇನು ?" ಎಂಬ ಪ್ರಶ್ನೆಗಳನ್ನು ಜನರ ಮುಂದಿಟ್ಟು, ಪ್ರಶ್ನೆ ಮುಖಾಂತರವೆ ಇವನು ಚರ್ಚೆ ಸಾಗಿಸುತ್ತಿದ್ದನು. ಕೊನೆಗೆ ಇವನ ವಿರೋಧಿಗಳು, ಜನರ ಬುದ್ಧಿಯನ್ನು ಕೆಡಿಸುವನೆಂಬ ಆರೋಪವನ್ನು ಇವನ ಮೇಲೆ ಹೊರಿಸಿದರು. ನಂತರ ವಿಷಪ್ರಾಶನದ ಶಿಕ್ಷೆಯಿಂದ ಇವನ ದೇಹಾವಸಾನವಾಯಿತು.

## ಪ್ಲೇಟೋ:—

ಪ್ಲೇಟೊ ಎಂಬಾತನು ಸಾಕ್ರೆಟಿಸನ ಶಿಷ್ಯವರ್ಗದಲ್ಲಿ ಶ್ರೇಷ್ಠನು. ಇವನು ಸಾಕ್ರೆಟಿಸನ ಉಪದೇಶದ ತಿರುಳನ್ನೊಳಗೊಂಡ ಪುಸ್ತಕಗಳನ್ನು ಬರೆದನು. "ಸಾಕ್ರೆಟಿಸನ ಸಂವಾದಗಳು" ಎಂಬ ಪುಸ್ತಕವೂ "ರಿಪಬ್ಲಿಕ್" ಎಂಬ ಪುಸ್ತಕವೂ ಇವುಗಳಲ್ಲಿ ಬಹಳ ಮಹತ್ವದವಾಗಿವೆ. ಇವನು 'ಆಕ್ಯಾದೆಮಿ' ಎಂಬ ಒಂದು ಶಾಲೆಯನ್ನು ನಡಿಸಿದನು. ಇವನ ನಂತರ ಅದು ೮೦೦ ವರ್ಷಗಳ ವರೆಗೆ ಬಾಳಿತು.

## ಅರಿಸ್ಟಾಟಿಲ್:—

ಅಕ್ಯಾಡಮಿಯಲ್ಲಿ ಅರಿಸ್ಟಾಟಲ್ ಎಂಬ ಶಿಷ್ಯನೊಬ್ಬನಿದ್ದನು. ಈ ಶಿಷ್ಯನು ಗುರುವಾದ ಪ್ಲೇಟೋನನ್ನು ಕೆಲವೊಂದು ವಿಷಯಗಳಲ್ಲಿ ಮೀರಿದವನಾದನು. ಅರಿಸ್ಟಾಟಲನು ತನ್ನದೇ ಆದ ಒಂದು ಶಾಲೆಯನ್ನು ಅಥೆನ್ಸ್ ಪಟ್ಟಣದಲ್ಲಿ ನಡಿಸಿದನು. ಪದಾರ್ಥವಿಜ್ಞಾನ ಶಾಸ್ತ್ರಗಳೆಲ್ಲಕ್ಕೂ ಇವನೇ ಮೂಲ ಸ್ಥಾಪಕನು ವಸ್ತುಗಳ ಸ್ವಭಾವವನ್ನು ಪರೀಕ್ಷಿಸಿ ತಿಳಿಯಲು ಪದಾರ್ಥಗಳ ವರ್ಗೀಕರಣವನ್ನು ಈತನು ಮೊದಲು ಮಾಡಿದನು ಅಲ್ಲದೆ ರಾಷ್ಟ್ರಶಾಸ್ತ್ರವನ್ನೂ ಇವನು ವಿಸ್ತರಿಸಿದನು ಇವನು ಮೆಸಿಡೋನಿಯದ ಅರಸನಾದ ಅಲೆಕ್ಝಾಂಡರನಿಗೆ ಗುರುವಾಗಿದ್ದರಿಂದ ಬೇಕಾದಷ್ಟು ಸಹಾಯವು ಇವನಿಗೆ ದೊರೆಯಿತು. ಇವನ ಪ್ರಭಾವದಿಂದಲೇ ಸಿಕಂದರನು ಪೃಥ್ವಿಯ ಅರ್ಧ ಭಾಗವನ್ನು ಗೆಲ್ಲುವವನಾದನು

## ಪ್ರಶ್ನಾವಲಿ:—

(೧) ಬೌದ್ಧಮತದ ತತ್ವಗಳು ಈಗ ಯಾವ ರೀತಿಯಲ್ಲಿ ಪರಿಣಮಿಸಿರುವವು?

(೨) ಕ್ರಾಂತಿಯು ಸಂಪ್ರದಾಯಕ್ಕೆ ಕೊಡಲಿಯ ಪೆಟ್ಟೆಂಬುದನ್ನು ಉದಹರಿಸಿ ಬರೆಯಿರಿ.

(೩) ಅರಿಸ್ಟಾಟಲನ ತತ್ವಗಳು ಯುರೋಪದ ರಾಜಕಾರಣದಲ್ಲಿ ಹೇಗೆ ಪರಿಣಮಿಸಿದವು ?

(೪) ಪಾರ್ಶಿ ಜನರು ಹಿಂದುಗಳ ಬಾಂಧವರು ಹೇಗೆ ಎಂಬುವನ್ನು ವಿವರಿಸಿರಿ

# ೬. ಭಾರತವೂ ಗ್ರೀಕರೂ.

**ಶಿಕಂದರನ ದಾಳಿ (ಕ್ರಿ. ಪೂ. ೩೨೬)·—**

ಶಿಕಂದರನು ಗ್ರೀಸ ದೇಶದ ಉತ್ತರದಿಕ್ಕಿನ ಮ್ಯಾಸಿಡೋನಿಯಾ ಎಂಬ ದೇಶದ ರಾಜನು ತನ್ನ ಭುಜಬಲದಿಂದ ಗ್ರೀಸ, ಇರಾಣ, ಬ್ಯಾಕ್ಟ್ರಿಯಾ ಮುಂತಾದ ರಾಜ್ಯಗಳನ್ನು ಗೆದ್ದು ಹಿಂದುಸ್ಥಾನದ ವಾಯವ್ಯ ಗಡಿಗೆ ಬಂದನು

ಹಿಂದುಸ್ಥಾನದವರಿಗೂ, ಗ್ರೀಕರಿಗೂ ವ್ಯಾಪಾರ ಸಂಬಂಧವು ಪೂರ್ವ ಕಾಲದಿಂದಲೆ ನಡೆಯುತ್ತಿತ್ತು. ಇದರ ಅಪಾರವಾದ ಐಶ್ವರ್ಯದ ಕತೆಗಳನ್ನು ಕೇಳಿ, ಇದನ್ನು ಗೆಲ್ಲಬೇಕೆಂದು ಮನಸ್ಸು ಮಾಡಿದನು.

ಈಗಿನ [illegible] ಸಂಚರಿಸಿ ಒಬ್ಬೊಬ್ಬ ರಾಜರನ್ನು ಸೋಲಿಸಿದನು. ಆಗ ತಕ್ಷಶಿಲೆಯಲ್ಲಿ ಆಳುತ್ತಿದ್ದ “ಅಂಬಿ” ಎಂಬ ರಾಜನು ಇವನಿಗೆ ಮಿತ್ರನೆನಿಸಿ ಸಹಾಯ ಮಾಡಿದನು.

[illegible] ಪ್ರಾಂತಕ್ಕೆ ಸಾಗಿದನು. ತಕ್ಷಶಿಲೆಯ [illegible] ಆಳುತ್ತಿದ್ದ ಪುರು ಅಥವಾ ಪೋರಸ್ ಎಂಬ ರಾಜನು [illegible] ಭೂಮಿಯಲ್ಲಿ ಎದುರಾದನು. ಯುದ್ಧದಲ್ಲಿ ಸೋತು, ಶಿಕಂದರನಿಗೆ ಶರಣು ಬಂದನು. ಶಿಕಂದರನು ಉದಾರತನ ತೋರಿಸಿ ಅವನನ್ನು ತನ್ನ ಮಾಂಡಲಿಕನನ್ನಾಗಿ ಮಾಡಿಕೊಂಡನು.

ಈಗ ಅಫಗಾನಿಸ್ತಾನವೆಂದು ಕರೆಯಲ್ಪಡುವ ದೇಶವು ಆಗ ಬೇರೆ ಬೇರೆ ರಾಜ್ಯಗಳಾಗಿ ಭಾಗಿಸಲ್ಪಟ್ಟಿತ್ತು. ಕೆಲವು ರಾಜರಿಂದ ಆಳಲ್ಪಟ್ಟು, ಇನ್ನುಳಿದವು ಪ್ರಜಾಸತ್ತಾತ್ಮಕ ಗಣರಾಜ್ಯಗಳಾಗಿದ್ದವು. ಪ್ರಜಾಸತ್ತಾತ್ಮಕ ರಾಜ್ಯಗಳಲ್ಲಿ ಕಠ ಮತ್ತು ಮಾಳವ ರಾಜ್ಯಗಳು ಬ್ರಾಹ್ಮಣರಿಂದ ಪ್ರೇರಿತವಾಗಿ ತಿರುಗಿ ಹೊರಟ ಶಿಕಂದರನೊಡನೆ ಯುದ್ಧ ಬೆಳಸಿ ಗ್ರೀಕರ ಹೃದಯದಲ್ಲಿ ಅಂಜಿಕೆಯನ್ನು ಹುಟ್ಟಿಸಿದವು. ಮಾಳವಕುಲದವರೊಡನೆ ಕದನ ನಡೆದಾಗ ಶಿಕಂದರನು ಗಾಯಗೊಂಡು ಪ್ರಜ್ಞೆ ತಪ್ಪಿದನು.

ಈ ದಂಡಯಾತ್ರೆಯಿಂದ ಗ್ರೀಕರಿಗೆ ಯಾವ ರಾಜಕೀಯ ಲಾಭವೂ ದೊರೆಯಲಿಲ್ಲ. ಆದರೆ ಗ್ರೀಕರ ಸಂಪರ್ಕದಿಂದ ಹಿಂದೀ ಜೀವನದಲ್ಲಿಯೂ ಕಲೆಯಲ್ಲಿಯೂ ಮಹತ್ವದ ಮಾರ್ಪಾಟಗಳಾದವು. ಶಿಲ್ಪಕಲೆಯಲ್ಲಿ "ಗಾಂಧಾರ ಪದ್ಧತಿ" ಎಂಬುದು ಒಡಮೂಡಿತು. ಆಗ ಪ್ರಚಲಿತವಿದ್ದ ಬುದ್ಧ ತತ್ವಗಳೂ, ಆಚರಣೆಯೂ ಗ್ರೀಕ ಸಂಪರ್ಕದಿಂದ ಬದಲಾವಣೆ ಹೊಂದಿದವು. ಬೌದ್ಧ ಮತದಲ್ಲಿಯೂ, ಆಚರಣೆಯಲ್ಲಿಯೂ ಮೂರ್ತಿಗಳ ಪೂಜೆ ಮುಂತಾದ ಬಳಿಕೆಗಳು ನಡೆದದ್ದು, ಬಹು ಮಟ್ಟಿಗೆ ಈ ಸಂಪರ್ಕ ದಿಂದಲೇ ! ಹಿಂದೀಯ ಸಮಾಜ ರಚನೆಯಾಗಲಿ, ರಣಕುಶಲತೆಯಾಗಲಿ, ಗ್ರೀಕರ ದಾಳಿಯಿಂದ ಬದಲಾವಣೆ ಹೊಂದಲಿಲ್ಲ. ಇಂಥ ದಾಳಿಗಳಿಂದ ಮಿಂಚಿನ ಯುದ್ಧವನ್ನಾಗಲಿ, ಗತ್ತಿನ ಯುದ್ಧವನ್ನಾಗಲಿ ಹಿಂದೀಯರು ಕಲಿ ಯಲಿಲ್ಲ. ಈ ಸಂಪರ್ಕದಿಂದ ಯುರೋಪ ಇಂಡಿಯಾಗಳ ನಡುವೆ ವ್ಯಾಪಾರ ಮಾತ್ರ ಬಹುಮಟ್ಟಿಗೆ ಬೆಳೆಯಿತು.



ಕಾಬೂಲದ ನೆರೆಯಲ್ಲಿ ಸಿಕ್ಕ ಕೃ.ಪೂ. ೩ರನೆಯ ಶತಕದಲ್ಲಿಯ ತಲೆಬುರುಡೆಯ ಆಧಾರದ ಮೇಲಿಂದ ಸಿದ್ಧಮಾಡಿದ ಮುಖ.

ಎಷ್ಟೋ ಗ್ರೀಕ ಜನರು ಬ್ಯಾಕ್ಟ್ರಿಯಾದಲ್ಲಿಯೂ, ಹಿಂದುಸ್ಥಾನ ದಲ್ಲಿಯೂ ನೆಲೆಸಿದರು. ಬರಬರುತ್ತ ಹಿಂದೀಯರೊಳಗೆ ಕಲೆತು ಸಮರಸ ವಾದರು.

## ಮೌರ್ಯ ಕಾಲ:—ಕ್ರಿ. ಪೂ. ೩೨೪—೨೧೧

ಮೌರ್ಯ ವಂಶದ ಮೊದಲನೇ ಅರಸು ಚಂದ್ರಗುಪ್ತನು. ಇವನು ನಂದ ವಂಶದ ಕೊನೆಯ ಅರಸನಿಂದ ಒಬ್ಬ ಶೂದ್ರ ಸ್ತ್ರೀಯಲ್ಲಿ ಹುಟ್ಟಿದವನೆಂದು ಹೇಳಿಕೆಯಿದೆ. ಚಾಣಕ್ಯ ಅಥವಾ ಕೌಟಿಲ್ಯನೆಂಬ ಬ್ರಾಹ್ಮಣನಿಂದ ಪ್ರೋತ್ಸಾಹಿತನಾಗಿ ಮಗಧದ ಮೇಲೆ ದಾಳಿ ಮಾಡಿ ಅದನ್ನು ವಶಮಾಡಿಕೊಂಡನು. ಇವನು ೨೪ ವರ್ಷ ರಾಜ್ಯಭಾರ ನಡಿಸಿದನು.

ಪಂಜಾಬಿನಿಂದ ಸಿಕಂದರನು ತಿರುಗಿದ ಬಳಿಕ ಅವನ ಪ್ರತಿನಿಧಿಯಾಗಿ ಸೆಲ್ಯೂಕಸನು ರಾಜ್ಯಭಾರ ನಡಿಸುತ್ತಿದ್ದನು. ಒಂದು ಸಲ ಸೆಲ್ಯೂಕಸನಿಗೂ, ಚಂದ್ರಗುಪ್ತನಿಗೂ ಯುದ್ಧವಾಗಿ ಸೆಲ್ಯೂಕಸನು ಸೋತನಲ್ಲದೆ, ಚಂದ್ರಗುಪ್ತನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಇವನ ಕೂಡ ಮೆಗ್ಯಾಸ್ಥನೀಸ ಎಂಬ ರಾಯಭಾರಿ ಬಂದಿದ್ದನು.

### ರಾಜ್ಯ ವಿಸ್ತಾರ —

ಚಂದ್ರಗುಪ್ತನ ರಾಜ್ಯದಲ್ಲಿ ಈಗಿನ ಅಫಗಾನಿಸ್ತಾನ, ಪಂಜಾಬ, ಯುಕ್ತಪ್ರಾಂತ, ಬಿಹಾರ, ಸಿಂಧು ಪ್ರದೇಶ, ಮತ್ತು ಒರಿಸಾ ಬಂಗಾಲವೂ ಸೇರಿದ್ದವು. ಚಂದ್ರಗುಪ್ತನು ತನ್ನ ಆಳಿಕೆಯ ಕೊನೆಯಲ್ಲಿ ಇಡೀ ಉತ್ತರ ಹಿಂದುಸ್ಥಾನವನ್ನು, ಮತ್ತು ಅಫಗಾನಿಸ್ತಾನವನ್ನು ಆಳಿದನು. ಆದರೆ ನರ್ಮದೆಯ ದಕ್ಷಿಣಕ್ಕೆ ಇವನು ಕಾಲುಚಾಚಿದಂತೆ ಉಲ್ಲೇಖವಿಲ್ಲ

ಕೊನೆಗೆ ಚಂದ್ರಗುಪ್ತನು ಜೈನ ಮತವನ್ನು ಸ್ವೀಕರಿಸಿದನು. ಭದ್ರಬಾಹುವೆಂಬ ಜೈನಯತಿಯ ಸಂಗಡ ದಕ್ಷಿಣಕ್ಕೆ ತೆರಳಿದನು. ಈಗಿನ ಮೈಸೂರ ಸಂಸ್ಥಾನದಲ್ಲಿಯ ಶ್ರವಣಬೆಳಗೊಳವೆಂಬಲ್ಲಿಗೆ ಬಂದು ತಪಸ್ಸನ್ನಾಚರಿಸಿ ಅಲ್ಲಿಯೇ ಮೃತಪಟ್ಟನು.

ಚಂದ್ರಗುಪ್ತನ ಆಸ್ಥಾನ ವೈಭವವು ಇರಾಣೀ ಸಮ್ರಾಟನ ಆಸ್ಥಾನ ವೈಭವವನ್ನು ಧಿಕ್ಕರಿಸಿತು. ಅರಮನೆಯ ಕಂಬಗಳಿಗೆ ಬಂಗಾರದ ಬಳ್ಳಿಗಳೂ, ಬೆಳ್ಳಿಯ ಹಕ್ಕಿಗಳೂ ಅಲಂಕಾರಗಳಾಗಿದ್ದವು. ಆರು ಅಡಿಯಷ್ಟು ಅಗಲವಿದ್ದ ಚಿನ್ನದ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಚಕ್ರವರ್ತಿಯು ಹೊರಗೆ ಕಾಣಿಸಿಕೊಂಡಾಗ ಪಲ್ಲಕ್ಕಿಯಲ್ಲಿ, ಅಥವಾ ಆನೆಯ ಮೇಲೆ ದಿವ್ಯ

ವಾದ ಅಂಬಾರಿಯಲ್ಲಿ ಕುಳಿತು ಹೊರಡುತ್ತಿದ್ದನು. ೨೦೦—೩೦೦ ಜನ ಸ್ತ್ರೀಯರೇ ಅಂಗರಕ್ಷಕರಾಗಿದ್ದರು. ಪ್ರತಿದಿನವೂ ಓಲಗವನ್ನು ನಡಿಸುತ್ತ ಪ್ರಜರ ಪ್ರಾರ್ಥನೆಗಳನ್ನು ಕೇಳುತ್ತ, ಗೂಢ ಚಾರರಿಗೆ ಕಿವಿಗೊಡುತ್ತಿದ್ದನು. ವಿಷಭಯದಿಂದ ಅರಮನೆಯಲ್ಲಿ ಯಾವ ಪದಾರ್ಥವನ್ನೂ ಪರೀಕ್ಷೆಯಿಲ್ಲದೆ ಬಿಡುತ್ತಿದ್ದಿಲ್ಲ.

ರಾಜ್ಯದ ಕೆಲವು ಭಾಗಗಳು, ತಮ್ಮ ಪೂರ್ವದ ರಾಜ್ಯಭಾರದ ಪದ್ಧತಿಗಳನ್ನೇ ಅನುಸರಿಸಿದವು. ಈ ಪ್ರಾಂತಗಳು ಸಕಾಲಕ್ಕೆ ಪೊಗದಿಯನ್ನು ಅರ್ಪಿಸುತ್ತಿದ್ದವು. ಮತ್ತೆ ಕೆಲವು ಪ್ರಾಂತಗಳು ಚಕ್ರವರ್ತಿಯಿಂದ ನಿಯುಕ್ತರಾದ ಪ್ರಾಂತಾಧಿಕಾರಿಗಳ ಅಧಿಕಾರಕ್ಕೆ ಒಳಗಾಗಿದ್ದವು. ಉದಾ—ಉಜ್ಜಯಿನಿ, ಗಿರಿನಗರ ಮುಂತಾದವುಗಳು.

ಚಕ್ರವರ್ತಿಗೆ ಸರ್ವಾಧಿಕಾರವಿತ್ತು. ಅವನು ರಾಜಧಾನಿಯಲ್ಲಿ ಓಲಗ ಮಾಡುತ್ತ, ಮಂತ್ರಿವರ್ಗಗಳಿಂದ ಮಂತ್ರಾಲೋಚನೆ ಹೊಂದುತ್ತ ಆಜ್ಞೆಗಳನ್ನು ಸೂಕ್ತವಾದ ರೀತಿಯಲ್ಲಿ ಸಾರುತ್ತಿದ್ದನು.

ರಾಜನು ಯುದ್ಧದಲ್ಲಿ ನೀತಿಯನ್ನು ತ್ಯಜಿಸುತ್ತಿದ್ದಿಲ್ಲ.

ಸಂಚಾರ ಸೌಕರ್ಯಗಳು ವಿಪುಲವಾಗಿದ್ದವು. ಈ ದೇಶದಲ್ಲಿ "ಕಳವೆಂಬುದೇ ಇಲ್ಲ" ಎಂದು ಮ್ಯಾಗ್ಯಾಸ್ಥೆನೀಸನು ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ನ್ಯಾಯ ತೀರ್ಮಾನವು ಧರ್ಮಶಾಸ್ತ್ರದಂತೆ ನಡೆಯುತ್ತಿತ್ತು. ರಾಜಾಧಿಕಾರಿಗಳೇ ಗಣಗಳ ಕೆಲಸ ನಡಿಸುತ್ತಿದ್ದರು. ಪಶುಚಿಕಿತ್ಸೆಗೂ, ಅಂತರಿಕ್ಷ ಪರೀಕ್ಷೆಗೂ ಆಡಳಿತೆಯ ಶಾಖೆಗಳಿದ್ದವು

ದ್ಯೂತ ಮದ್ಯಪಾನ ಇವು ಊರ ಹೊರಗೆ ನಡೆಯಬೇಕಿತ್ತು. ವೈದ್ಯ

ಶ್ರೇಷ್ಠ ಶಾಖೆಗಳು ೩೦ ಇದ್ದವು. ಗ್ರಾಮ ನಗರಗಳಲ್ಲಿ ಪ್ರಜಾಮುಖ್ಯರೇ ಅಧಿಕಾರ ಮಾಡುತ್ತಿದ್ದರು.

**ಮ್ಯಾಗ್ಯಾಸ್ಥೆನೀಸನ ವರದಿ:—**

ಜನರು ಸುಖಿಗಳೂ, ಶಾಂತರೂ ನಿಷ್ಪಕ್ಷಪಾತಿಗಳೂ ಆಹುದು. ಮದ್ಯಪಾನ ಅಪರೂಪ. ಭತ್ತದ ಅನ್ನವೇ ಮುಖ್ಯ ಆಹಾರ. ಏಕಪತ್ನೀತ್ವವು

ಸಾಮಾನ್ಯವಾದುದು. ಬಹುಪತ್ನೀತ್ವವು ನಿಷಿದ್ಧವಲ್ಲ. ಸ್ತ್ರೀಯರಿಗೆ ಗೌರ-
ವವೂ ಅಧಿಕಾರವೂ ಇತ್ತು. ಸಹಗಮನವನ್ನು ಕಠರಲ್ಲಿಯೂ ತಕ್ಷಶಿಲೆಯಲ್ಲಿ
ಯೂ ಮ್ಯಾಗ್ಯಾಸ್ಥನೀಸನು ಕಂಡನು. ಮನೆಗೆ ಕೀಲಿಯನ್ನೇ ಹಾಕುತ್ತಿರ
ಲಿಲ್ಲ ಜನರ ವಚನವೇ ಪ್ರಮಾಣ. ಹತ್ತಿಯ ವಸ್ತ್ರ ಉಡುತ್ತಿದ್ದರು.
ಕಸೂತಿಯ ಕೆಲಸದಲ್ಲಿ ಆಸ್ಥೆದೋರಿದರು. ಶ್ರೀಮಂತರು ಹೊರಗೆ ಹೊರ
ಟಾಗ ಸೇವಕರಿಂದ ಛತ್ರಿ ಹಿಡಿಸಿಕೊಳ್ಳುತ್ತಿದ್ದರು. ರಥಗಳೂ ಬಳಕೆಯಲ್ಲಿ
ದ್ದವು. ದಾಸ್ಯವೆಂಬುದು ಇದ್ದಿಲ್ಲ.

ಚಂದ್ರಗುಪ್ತನ ತರುವಾಯ ಆತನ ಮಗ ಬಿಂದುಸಾರನು ಚಕ್ರವರ್ತಿ
ಯಾದನು. ಈತನೂ ೨೪ ವರ್ಷ ರಾಜ್ಯಭಾರ ಮಾಡಿ ಕಾಲಗತಿಯ
ನೈದಿದನು.

ನಂತರ ಅಶೋಕನು ಪಟ್ಟವೇರಿದನು.

**ಅಶೋಕ ಸಮ್ರಾಟ್ —**

ಕ್ರಿ. ಪೂ. ೨೭೩ ರಲ್ಲಿ ಪಟ್ಟವೇರಿದನು ಪಟ್ಟಕ್ಕೆ ಬಂದಾಗ ಶೂರನೂ,
ಶಾಂತನೂ, ಮಹತ್ವಾಕಾಂಕ್ಷಿಯೂ ಆಗಿದ್ದನು

ಕಳಿಂಗ ದೇಶದ ಮೇಲೆ ಹರಿ ಹೋದಾಗ ನಡೆದ ಹತ್ಯೆಗಳನ್ನೂ, ಜನರ
ದುಃಖಸಂಕಟಗಳನ್ನೂ ನೋಡಿ ಮನಸ್ಸಿನಲ್ಲಿ ಮರುಕಪಟ್ಟನು. ಆದ್ದರಿಂದ
ಯುದ್ಧವು ಅನರ್ಥ ಹೇತುವೆಂದೂ, ಯುದ್ಧವು ವರ್ಜ್ಯವೆಂದೂ ನಿಶ್ಚಯಿಸಿ
ದನು.

ಇದೇ ವೇಳೆಗೆ ಉಪಗುಪ್ತನೆಂಬ ಬೌದ್ಧ ಭಿಕ್ಷುವು ಇವನನ್ನು ಕಂಡು
ಇವನಿಗೆ ಬೌದ್ಧ ತತ್ವಗಳನ್ನು ಬೋಧಿಸಿದನು. ಅಹಿಂಸಾತತ್ವವನ್ನು ತಿಳಿದು
ಬೇಟೆಯನ್ನೂ ಆಹಾರಕ್ಕಾಗಿ ಪಶುವಧೆಯನ್ನೂ ನಿಲ್ಲಿಸಿದನು. ಕೆಲಕಾಲದ
ನಂತರ ಬುದ್ಧ ಭಿಕ್ಷುವಾದನು.

ಕಾದಾಡಿ ಜಗ ಕೆಡಹುವದಕ್ಕಿಂತ ಲೋಕದ ಅಜ್ಞಾನವನ್ನೂ, ಪಾತಕ
ವನ್ನೂ ಹೋಗಲಾಡಿಸಿ ಅಹಿಂಸಾಧರ್ಮವನ್ನು ನೆಲೆಗೊಳಿಸುವದೇ ಉಚಿತ
ವೆಂದು ನಿರ್ಧಾರಗೊಳಿಸಿದನು. ಇದನ್ನು ಸ್ತಂಭ, ಸ್ತೂಪ, ಗಿರಿ, ಶಿಲೆ
ಗಳಲ್ಲಿ ಬರೆದಿಟ್ಟನು.

ಅಲೆಕ್ಸಾಂಡರನು ಈ ದೇಶದಲ್ಲಿ ತನ್ನ ಆಳಿಕೆಯನ್ನು ನೆಲೆಸಲು ಯತ್ನಿಸಿದನು. ನಂತರ ಈ ದೇಶವು ರೋಮುಕರ ಆಳಿಕೆಗೆ ಒಳಪಟ್ಟಿತು.

ಆದರೆ ಪರರಾಜರ ನೊಗದ ಭಾರಕ್ಕೆ ಬಗ್ಗದ ಯಹೂದಿ ಜನಾಂಗವು ಒಂದುಗೂಡಿತು. ತಮ್ಮ ಧರ್ಮ, ಆಚಾರ, ವ್ಯವಹಾರಗಳ ಮೇಲೆ ಅವರ ಮಮತೆ ಹೆಚ್ಚಿತು. ಈ ಕಾರಣ ಕೆಳಗಿನ ನಂಬಿಗೆಗಳು ಬಳಿಕೆಯಲ್ಲಿ ಬಂದವು—ಯಹೂದಿಗಳೆಲ್ಲರೂ ಮಹಾತ್ಮನಾದ ಅಬ್ರಹಾಮನ ವಂಶಜರು. ಯಹೋವನು ಅವರ ದೇವಸರ್ವೋತ್ತಮನು. ಅವನಲ್ಲದೆ ಬೇರೆ ದೇವರಿಲ್ಲ. ಅವನು ಮಿಕ್ಕ ಜನಾಂಗಗಳಿಗಿಂತ ಯಹೂದಿಗಳನ್ನು ಮಿಗಿಲೆನಿಸುವನೆಂದು ಮಾತು ಕೊಟ್ಟಿರುವನು. ಆ ಮಾತನ್ನು ನಡಿಸುವದಕ್ಕಾಗಿ ಅವನು ಯಹೂದಿ ಜನಾಂಗಕ್ಕೆ ಒಬ್ಬ ನಾಯಕನನ್ನು ರಾಜನನ್ನು ಕ್ರಿಸ್ತನನ್ನು(ಬಿಡುಗಡೆಮಾಡುವವನನ್ನು) ಸದ್ಯದಲ್ಲಿಯೇ ಕಳಿಸುವನು. ಅವನು ರೋಮಕರನ್ನು ಓಡಿಸಿ ಪ್ರಪಂಚವನ್ನು ಗೆದ್ದು "ದೇವರ ರಾಜ್ಯ"ವನ್ನು ನೆಲೆಗೊಳಿಸುವನು.

ಯಹೂದಿ ಆಚಾರ್ಯರು ಈ ತರದ ಹೇಳಿಕೆಗಳನ್ನು ಎಷ್ಟೋ ವರ್ಷಗಳ ವರೆಗೆ ಜನರಲ್ಲಿ ಹರಡಿದರು ಜನರು ಆಶೆಬಟ್ಟು ಕ್ರಿಸ್ತನ ಬರುವಿಕೆಗಾಗಿ ಕಾಯುತ್ತಿದ್ದರು. ಈ ಪರಿಸ್ಥಿತಿಯಲ್ಲಿ ಏಸುವು ಉದಯನಾದನು.

ಏಸುವು ನಜರತ್ ಎಂಬ ಗ್ರಾಮದಲ್ಲಿ ಒಂದು ಬಡ ಮನೆತನದಲ್ಲಿ ಹುಟ್ಟಿದನು ಇವನ ತಂದೆತಾಯಿಗಳು ದಾವೂದ್ ಎಂಬ ರಾಜನ ಮನೆತನಕ್ಕೆ ಹೊಂದಿಕೊಂಡಿದ್ದರೂ, ಬಡತನದಲ್ಲಿದ್ದರು ಚಿಕ್ಕಂದಿನಲ್ಲಿ ಇವನು ಯಹೂದಿ ಧರ್ಮಗ್ರಂಥಗಳನ್ನು ಕಲಿತನು. ಒಬ್ಬ ಯಹೂದಿ ಆಚಾರ್ಯನ ಬೆನ್ನು ಹತ್ತಿ ಅವನಿಂದ ದೀಕ್ಷೆ ಪಡೆದನು. ಒಂದು ದಿನ ನದಿಯಲ್ಲಿ ಜಳಕ ಮಾಡಿ ದಂಡೆಗೆ ಬರುವಾಗ ಅಶರೀರ ವಾಣಿಯು ಹೀಗೆ ನುಡಿಯಿತು —"ನೀನು ನನ್ನ ಮಗನು ನಾನು ನಿನ್ನನ್ನು ಆರಿಸಿದ್ದೇನೆ." ಅಂದಿನಿಂದ ಏಸುವು ಧರ್ಮ ಬೋಧೆಗೆ ಮೊದಲು ಮಾಡಿದನು. ಆಗ ಏಸುವು ೩೦ ವರ್ಷದವನು. ನಂತರ ಕೆಲಕಾಲ ಏಸುವು ತಪಸ್ಸು ನಡಿಸಿ ಸೈತಾನನ(ಪಾಪಬುದ್ಧಿ) ಪರೀಕ್ಷೆಯಲ್ಲಿ ಗೆಲುವನ್ನು ಸಂಪಾದಿಸಿದನು. ಬಳಿಕ, ಜನತೆಯ ಮೇಲಿನ ಪ್ರೀತಿಯಿಂದ ಏಸುವು ಜನರಿಗೆ ಮತ್ತೆ ಕಾಣಿಸಿಕೊಂಡನು

ಕೇರಿ ಕೇರಿಗಳಲ್ಲಿ ಸುತ್ತಾಡಿ ಜನರಿಗೆ ಬೋಧೆ ಮಾಡತೊಡಗಿದನು.

**ಏಸುವಿನ ಬೋಧೆ:—**

ಮನುಷ್ಯಮಾತ್ರನಿಗೆ ದೇವರು ತಂದೆಯಾಗಿದ್ದಾನೆ. ಆದುದರಿಂದ, ಮಾನವರೆಲ್ಲರೂ ಸೋದರರು. ದೇವರನ್ನು ಸಂತೊಷಗೊಳಿಸಲು ಮನುಷ್ಯರೆಲ್ಲರೂ ಸಹಕಾರದಿಂದ ನಡೆದುಕೊಳ್ಳಬೇಕು. ದೇವರ ರಾಜ್ಯದ ಪ್ರಜೆಯೆನಿಸಿದ ಮನುಷ್ಯನು, ಆತನನ್ನು ಪ್ರೀತಿಗೊಳಿಸಲು ನೀತಿಯಿಂದ ನಡೆದುಕೊಳ್ಳಬೇಕು. "ಇತರರು ನಿನ್ನಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ನೀನು ಆಶಿಸುವಿಯೋ, ಅದರಂತೆಯೆ ನೀನು ಇತರರಲ್ಲಿ ವರ್ತಿಸು." ಎಂಬುದು ದೇವರ ರಾಜ್ಯದಲ್ಲಿಯ ನಡವಳಿಕೆಯ ಸಾರ "ನೆರೆಹೊರೆಯವರನ್ನು ಪ್ರೀತಿಸು ವೈರಿಯನ್ನು ಪ್ರೀತಿಯಿಂದ ಎದುರಿಸು." ಎಂಬ ಏಸುವಿನ ಉಪದೇಶಗಳು ಇಂದಿಗೂ ಸ್ಮರಣೀಯವಾಗಿವೆ "ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು" ಎಂಬ ನ್ಯಾಯವಿದ್ದ ಆ ಕಾಲದಲ್ಲಿ "ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕೆನ್ನೆಯನ್ನು ಕೊಡು!" ಎಂದು ಏಸುವು ಹೇಳಿದನು. "ಹೋಗು, ಎಲ್ಲ ಆಸ್ತಿಯನ್ನು ಮಾರಿ ಬಡವರಿಗೆ ಕೊಡು" ಎಂಬುದು ಅವನ ಉದಾರ ಹೃದಯದ ಉದ್ಗಾರವಾಗಿತ್ತು.

ಈ ಮಾತುಗಳೆಲ್ಲ ಯಹೂದಿಗಳಿಗೆ ಸೇರದಾದವು. ಯಾಕಂದರೆ, ತಾವು ಮಾತ್ರ ದೇವರಿಗೆ ಸಮೀಪದವರೆಂದು ನಂಬಿ, ಯಹೂದಿಗಳು ಇತರರನ್ನು ತಿರಸ್ಕಾರದಿಂದ ನೋಡುತ್ತಿದ್ದರು. ಹೇಗಿದ್ದರೂ ಏಸುವು ಇವರ ಆಚಾರ ಸಂಪ್ರದಾಯಗಳನ್ನು ವಿರೋಧಿಸುವದು ಇವರಿಗೆ ಸಹನವಾಗಲಿಲ್ಲ.

ಈ ರೀತಿ ಉಪದೇಶ ಮಾಡುತ್ತ ಹಳ್ಳಿಯಿಂದ ಹಳ್ಳಿಗೆ ತಿರುಗುತ್ತಿದ್ದ ಏಸುವು ಒಮ್ಮೆ ಜರೂಸಲೇಮ ಎಂಬ ಊರಿಗೆ, ಒಂದು ಜಾತ್ರೆಯ ನಿಮಿತ್ತ ಬಂದನು. ಅಲ್ಲಿ ನಗರಚೌಕದಲ್ಲಿ ನಿಂತು ಉಪದೇಶ ಮಾಡಹತ್ತಿದನು. ಇವನ ಪ್ರಭಾವಕ್ಕೆ ಅಂಜಿ ಅಲ್ಲಿಯ ಅಧಿಕಾರಿಗಳು ಇವನನ್ನು ತಡೆದರು. ಮತ್ತು ಇವನನ್ನು ವಿಚಾರಣೆಗೆ ಗುರಿಮಾಡಿದರು. ಯಹೂದಿ ನ್ಯಾಯಾಧೀಶರು ಇವನಿಗೆ ದೇಹಾಂತ ಶಿಕ್ಷೆಯೇ ಯೋಗ್ಯವೆಂದು ತೀರ್ಮಾನಿಸಿ, ಆಗಿನ ಪದ್ಧತಿಯಂತೆ ಸಿಲುಬೆಗೆ ಸಿಕ್ಕಿಸಿ, ಏಸುವಿನ ಪ್ರಾಣಕಳೆದರು.

ಇದು ಕ್ರಿ. ಶ. ೩೦ ರಲ್ಲಿ ನಡೆಯಿತು.

ಏಸುವಿನ ಅವಸ್ಥೆಯನ್ನು ನೋಡಿದ ಇವನ ಶಿಷ್ಯರು ಈಗ ಕಂಗೆಟ್ಟರು. ಆದರೆ ಅವನ ತತ್ವವನ್ನನುಸರಿಸಿ ಶಾಂತರಾಗಿದ್ದರು. ಮುಂದೆ ಮೂರು ದಿನಗಳ ಮೇಲೆ ಏಸುವು ತನ್ನ ಶಿಷ್ಯರಿಗೆ ಸದೇಹನಾಗಿ ಕಾಣಿಸಿಕೊಂಡನಂತೆ. ಮತ್ತು ತನ್ನ ದಿವ್ಯದೇಹದಿಂದಲೇ ತಂದೆಯಾದ ದೇವರ ಸಮೀಪಕ್ಕೆ ಹೋದ ಹಾಗೆ ಅನೇಕರಿಗೆ ಭಾಸವಾಯಿತು. ಆದ್ದರಿಂದ, ಈ ಮೊದಲೇ ತಾವು ನಿರೀಕ್ಷಿಸುತ್ತಿದ್ದ ಕ್ರಿಸ್ತನೇ ಈ ಏಸುವೆಂದು ಅವರು ನಂಬಿದರು ಅಂದಿನಿಂದ ಅವನನ್ನು ಎಲ್ಲಡೂ ಪೂಜಿಸತೊಡಗಿದರು. ಅದುವೆ ಕ್ರೈಸ್ತಧರ್ಮವಾಯಿತು.

ಈ ಹೊಸ ಧರ್ಮವು ಯಹೂದಿಗಳಲ್ಲಿಯೂ ಸುತ್ತಲಿನ ಜನಾಂಗಗಳಲ್ಲಿಯೂ ಹಬ್ಬತೊಡಗಿತು. ಸೆಂಟ ಪಾಲನೆಂಬ ಮಹಾನುಭಾವನು ಕ್ರಿಸ್ತಮತಕ್ಕೆ ಒಂದು ರೂಪವನ್ನು ತಂದುಕೊಟ್ಟನು ಅವನು ಒಂದು ದಿನ ಡೆಮಾಸ್ಕಸ್ ನಗರಕ್ಕೆ ಹೊರಟಾಗ "ನೀನು ಏಸುನಿನಂತೆ ನಡೆ" ಎಂದು ಆಕಾಶವಾಣಿಯಾಯಿತಂತೆ ಅಂದಿನಿಂದ ಇವನು ಏಸುವಿನ ಮತವನ್ನು ಪ್ರಚಾರ ಮಾಡತೊಡಗಿದನು. ಏಸಿಯಾಮೈನರ, ಗ್ರೀಸ ಮುಂತಾದ ದೇಶಗಳಲ್ಲಿ ಈ ಮತವನ್ನು ಹಬ್ಬಿಸಿದನು ಬಳಿಕ ರೋಮ ಸಾಮ್ರಾಜ್ಯದ ಇತರ ದೇಶಗಳಲ್ಲಿಯೂ ಇವನು ಸಂಚರಿಸಿದನು. ಕೊನೆಗೆ ರೋಮದಲ್ಲಿಯೆ ಮರಣ ಹೊಂದಿದನು. ಅಂದಿನಿಂದ ರೋಮವು ಕ್ರಿಸ್ತಮತದ ಕೇಂದ್ರವಾಗಿದೆ.

ಮುಂದೆ ಎರಡುಮೂರು ಶತಮಾನಗಳ ವರೆಗೆ ರೋಮಚಕ್ರವರ್ತಿಗಳು ಕ್ರಿಸ್ತಮತವನ್ನು ತುಳಿದು ಹಾಕುತ್ತಲೆ ಇದ್ದರು. ಕ್ರಿ. ಶ. ೩೨೩ರಲ್ಲಿ ಕಾನ್ ಸ್ಟಂಟೈನ ಎಂಬ ಚಕ್ರವರ್ತಿಯು ಕ್ರಿಸ್ತಮತವನ್ನು ಸ್ವೀಕರಿಸಿದನಲ್ಲದೆ, ಆದನ್ನು ಚನ್ನಾಗಿ ಪ್ರೋತ್ಸಾಹಿಸಿದನು. ಅಂದಿನಿಂದ ಈ ಮತವು ಪ್ರಬಲವಾಗಿ ಬೆಳೆಯಿತು ಮುಂದೆ ಬೇಗನೆ ಯುರೋಪದಲ್ಲೆಲ್ಲ ಹಬ್ಬಿತು. ೧೬ನೆಯ ಶತಮಾನದ ನಂತರ ಕ್ರಿಶ್ಚನ್ ಮಿಶನರಿಗಳು ಹಿಂದುಸ್ಥಾನ, ಚೀನ, ಜಪಾನ ಮುಂತಾದ ದೇಶಗಳಿಗೂ ಹರಿಬಿದ್ದರು. ಇಂದು ಸುಧಾರಿಸಿದ ಜಗವೆನಿಸುವ ಯುರೋಪ, ಅಮೇರಿಕಾ, ಆಸ್ಟ್ರೇಲಿಯಾಗಳಲ್ಲಿಯ ಜನರೆಲ್ಲರೂ ಕ್ರಿಶ್ಚನ್ನರಿದ್ದಾರೆ.

**ಪ್ರಶ್ನಾವಲಿ:—**

(೧) ಕ್ರಿಸ್ತಬೋಧೆಯ ಸಾರಾಂಶವನ್ನು ಹೇಳಿರಿ.
(೨) ಸೆಂಟ ಪಾಲನ ಕಥೆಯನ್ನು ಹೇಳಿರಿ.
(೩) ಕ್ರಿ ಪೂ. ದಲ್ಲಿ ಯಹೂದಿ ಜನರ ನಂಬಿಕೆಗಳು ಏನು ಇದ್ದವು?

# ೮. ಗುಪ್ತ ಸಮ್ರಾಟರು.

ಅಶೋಕನ ನಂತರ ಭಾರತದಲ್ಲಿ ಸಾಮ್ರಾಜ್ಯ ಕಟ್ಟಿದ ಅರಸರು ಗುಪ್ತ ಅರಸರೆಂಬವರು. ಇವರು ಮಗಧದಲ್ಲಿ ಆಳಿದರು ಇವರ ಕಾಲವು ಸುವರ್ಣ ಯುಗವೆನಿಸಿತು. ಅವರ ಹೆಸರುಗಳು ಕೆಳಗಿನಂತಿವೆ.—೧ನೇ ಚಂದ್ರಗುಪ್ತ (೩೨೦--೩೪೦), ಸಮುದ್ರಗುಪ್ತ, ೨ನೇ ಚಂದ್ರಗುಪ್ತ, ಕುಮಾರಗುಪ್ತ.

**೧ನೇ ಚಂದ್ರಗುಪ್ತ:—**

೧ನೇ ಚಂದ್ರಗುಪ್ತನು ಪಾಟಲೀಪುತ್ರವನ್ನು ಅಪಹಾರ ಮಾಡಿ, ಅಲ್ಲಿ ಸುಪ್ರಸಿದ್ಧವಾದ ಸುರಾಂಗವೆಂಬ ಅರಮನೆಯನ್ನು ನೆಲಿಸಿದನು. ಪ್ರಜರಿಗೆ ಬೇಡಾದವನಾದ್ದರಿಂದ, ಅವನು ಯುದ್ಧಕ್ಕೆ ಹೋದಾಗ ದಂಗೆಯೆದ್ದು, ಸಭೆಯಲ್ಲಿ ಅವನು ಅಯೋಗ್ಯನೆಂದು ನಿಷ್ಕರ್ಷಿಸಿದರು. ಆದ್ದರಿಂದ ಇವನು ತನ್ನ ಮಗನಾದ ಸಮುದ್ರಗುಪ್ತನಿಗೆ "ಇನ್ನು ನೀನೇ ರಾಜ್ಯವನ್ನು ರೂಪಿಸಿಕೊ." ಎಂದು ಹೇಳಿ ತೀರಿಕೊಂಡನು.

**ಸಮುದ್ರಗುಪ್ತ (೩೪೦-೩೭೫)—**

ಸಮುದ್ರಗುಪ್ತನು ಬಹು ಪರಾಕ್ರಮಿಯಾದ ಅರಸು. ಇವನು ತನ್ನ ಬಲವನ್ನೂ ವರ್ಚಸ್ಸನ್ನೂ ದಕ್ಷಿಣದಲ್ಲಿ ಕಂಚಿಯವರೆಗೆ ಹಬ್ಬಿಸಿದನು. ಇವನ ಕದನಪ್ರಚಂಡತನವನ್ನು ನೋಡಿ, ನೆರೆಯ ರಾಜರೂ, ದೂರದ ಪ್ರಭುಗಳೂ ತಮ್ಮ ದೂತರನ್ನು ಕಳುಹಿ ಈತನ ಚಕ್ರಾಧಿಪತ್ಯವನ್ನೊಪ್ಪಿಕೊಂಡರು. ಒಟ್ಟಿನಲ್ಲಿ ಸಮುದ್ರಗುಪ್ತನು ಸಮಸ್ತ ಭಾರತಕ್ಕೂ ಒಡೆಯನೆನಿಸಿದನು. ಸಿಂಹಳದ ರಾಜನೂ, ಬಂಗಾಲದ ಕೊಲ್ಲೆಯ ಆಚೆ ರಾಜ್ಯ ಕಟ್ಟಿಕೊಂಡಿದ್ದ ಆರ್ಯ ವಂಶದ ರಾಜರೂ ಈತನಿಗೆ ರಾಯಭಾರ ಕಳುಹಿದರು.

ಈತನ ಆಸ್ಥಾನವು ಸಾಮಂತ ಪ್ರಭುಗಳಿಂದಲೂ, ಮಂತ್ರಿ ದಳಪತಿಗಳಿಂದಲೂ ತುಂಬಿರುತ್ತಿತ್ತಲ್ಲದೆ, ಕವಿಜನರಿಂದಲೂ, ವಿದ್ವಾಂಸರಿಂದಲೂ ತುಂಬಿರುತ್ತಿತ್ತು. ಸ್ವತಃ ಉದಾರನೂ, ವಿದ್ಯಾಸಂಪನ್ನನೂ ಆಗಿದ್ದನು. ಅಂತೂ ರಾಜಗುಣಗಳಿಂದ ಶೋಭಿಸಿ ಈತನು ಆದರ್ಶ ರಾಜನೆನಿಸಿದ್ದಾನೆ. ಈತನಿಗೆ ಬಾಲಾದಿತ್ಯ, ಪರಮಭಟ್ಟಾರಕ ಮುಂತಾದ ಬಿರುದುಗಳಿದ್ದವು. ೩೭೫ ರಲ್ಲಿ ಮರಣ ಹೊಂದಿದನು.

**೨ನೇ ಚಂದ್ರಗುಪ್ತ(೩೭೫-೪೧೩):—**

ಈತನು ಉಜ್ಜಯಿನಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಕಾಲಿದಾಸ, ಅಮರಸಿಂಹ ಇತ್ಯಾದಿ ಕವಿಗಳು ಈತನ ಆಸ್ಥಾನದಲ್ಲಿ ನವರತ್ನಗಳೆನಿಸಿದರು. *ಕಾಲಿದಾಸನು ಕವಿಚಕ್ರವರ್ತಿಯು. ಇವನು ಸಂಸ್ಕೃತದಲ್ಲಿ ಮೂರು ನಾಟಕಗಳನ್ನೂ, ಮೂರು ಕಾವ್ಯಗಳನ್ನೂ ಬರೆದಿರ್ಪ್ಪವನು. ಇವನ ನಾಟಕಗಳಲ್ಲಿ ಅಭಿಜ್ಞಾನ ಶಾಕುಂತಲವೆಂಬುದು ಜಗತ್ತಿಗೆ ಮಿಗಿಲೆನಿಸಿದೆ. ಅದರಂತೆ ರಘುವಂಶವೆಂಬ ಕಾವ್ಯವಾದರೂ ಆದರ್ಶ ಕಾವ್ಯವಾಗಿದೆ. ೨ನೇ ಚಂದ್ರಗುಪ್ತನು ಶಿಲ್ಪಕಲೆಗೂ ಬಹಳ ಪ್ರೋತ್ಸಾಹನೆ ಕೊಟ್ಟನು. ಒಟ್ಟಿನ ಮೇಲೆ ಇವನು ಆದರ್ಶ ರಾಜನೆಂದು ಹೆಸರಾದನು.

**ಕುಮಾರಗುಪ್ತ(೪೧೩-೪೫೫).—**

ಇವನು ಅಶ್ವಮೇಧವನ್ನು ಮಾಡಿದನು. ನಾಲಂದಾ ವಿಹಾರವು ಈತನಿಂದಲೇ ಸ್ಥಾಪಿಸಲ್ಪಟ್ಟಿತು.

**ಗುಪ್ತಕಾಲದ(ಸ್ವರ್ಣಯುಗದ) ಜನಜೀವನವು:—**

ಈ ಕಾಲದಲ್ಲಿ ಸಂಸ್ಕೃತವು ರಾಜಭಾಷೆಯಾಗಿ ಮೆರೆಯಿತು. ಸಮುದ್ರಗುಪ್ತನಂತಹರ ವಿಜಯಲಾಭವೂ, ಅಪಾರವಾದ ಐಶ್ವರ್ಯವೂ ಈ ಕಾಲದ ಭಾರತೀಯರಲ್ಲಿ ದೊಡ್ಡ ದೊಡ್ಡ ಧ್ಯೇಯಗಳನ್ನು ಕಲ್ಪಿಸಿದವು. ರಾಜ್ಯಭಾರ ನಿರ್ವಹಣದಲ್ಲಿ, ಸಾಹಿತ್ಯದಲ್ಲಿ, ಧರ್ಮಪ್ರಚಾರದಲ್ಲಿ, ಶಾಸ್ತ್ರವ್ಯಾಸಂಗದಲ್ಲಿ, ಬೃಹತ್ತರವಾದ ಭಾರತವಿಸ್ತಾರದಲ್ಲಿ, ಲಲಿತಕಲೆಗಳಲ್ಲಿ ಈ ಕಾಲದ ಮಹಿಮೆ ಕಂಡುಬಂದಿತು. ಮಹಾಭಾರತ ಮುಂತಾದ ಪುರಾಣಗಳು ವಿಸ್ತರಿಸಿ ಬರೆ

---

* ಇವನ ಕಾಲವು ಇನ್ನೂ ನಿಶ್ಚಿತವಿಲ್ಲ.

ಯಲ್ಲಿದ್ದವು. ಕಾಳಿದಾಸ, ಭಾಸ, ಭವಭೂತಿ ಮುಂತಾದ ಕವಿಗಳು ಇದೇ ಕಾಲಕ್ಕೆ ಜನ್ಮವೆತ್ತಿದರು. ಅಜಂತಾ, ಘಾರಾಪುರಿ, ಉದಯಗಿರಿ ಮುಂತಾದೆಡೆಗಳಲ್ಲಿಯ ಶಿಲ್ಪಸೃಷ್ಟಿಯೂ ಈ ಕಾಲವು ಕೊಟ್ಟ ಫಲಗಳು! ಒಟ್ಟಿಗೆ ಭಾರತೀಯ ಸಂಸ್ಕೃತಿಯ ಪುಷ್ಪಕಾಲವಿದು. ಇದೇ ಸ್ವರ್ಣಕಾಲವು.

ವೇದಕಾಲದ ಜನಜೀವನವು ಬಹಳೇ ಮಾರ್ಪಾಡು ಹೊಂದಿತ್ತು. ಬೌದ್ಧ ತತ್ತ್ವಗಳ ಪರಿಣಾಮವಾಗಿ ಜನರು ಮದ್ಯಮಾಂಸಗಳನ್ನು ತ್ಯಜಿಸಿದ್ದರು. ಇದಕ್ಕೆ ಚಾಂಡಾಲರು ಮಾತ್ರ ಅಪವಾದವಾಗಿದ್ದರು. ದೇಶದಲ್ಲಿ ವಿಪುಲವಾದ ಪ್ರವಾಸಸೌಕರ್ಯಗಳಿದ್ದವು. ಉಚಿತ ಚಿಕಿತ್ಸಾಲಯಗಳಿದ್ದವು. ಜನರಲ್ಲಿ ಶಾಂತಿ, ಉದಾರತೆಗಳು ನೆಲೆಸಿದ್ದವು. ಬ್ರಾಹ್ಮಣ ಬೌದ್ಧ ವಿದ್ವಾಂಸರು ಪರಸ್ಪರ ಸೌಹಾರ್ದದಿಂದಿದ್ದರು.

ಆಡಳಿತವು ಸಮರ್ಥವಾದುದೂ, ಉದಾರವಾದುದೂ ಇತ್ತು. ತೆರಿಗೆಗಳು ಹಗುರಾದುವೂ, ಸಮ್ಮತವೂ ಆಗಿದ್ದವು. ಶೀಕ್ಷೆಯು ಕೃಪಾಪೂರಿತವಾಗಿ ಲಘುವಾಗಿತ್ತು. ಮರಣದಂಡನೆ ಇದ್ದಿಲ್ಲ. ದೊಡ್ಡ ಶೀಕ್ಷೆಯೆಂದರೆ—ಬಲಗೈ ಕಡಿಯುತ್ತಿದ್ದರು. ರಾಜಾಧಿಕಾರಿಗಳಿಗೂ ಸೈನಿಕರಿಗೂ ಸಂಬಳವಿತ್ತು.

ಗುಪ್ತರ ಕಾಲದಲ್ಲಿ ಬೌದ್ಧಧರ್ಮದ ಅವನತಿಯ ಕುರುಹುಗಳು ಕಾಣುವವು. ಶಾಸ್ತ್ರ ಪುರಾಣಗಳ ವ್ಯಾಸಂಗ ಹೆಚ್ಚಾಗಿ, ವೈದಿಕ ತತ್ತ್ವಗಳು ಜನರ ಮನಮುಟ್ಟಿದವು. ಪುರಾಣೋಕ್ತ ದೇವತೆಗಳಾದ ವಿಷ್ಣು ಶಿವ ಇವರು ಪೂಜೆಗೊಳ್ಳಹತ್ತಿದರು. ಹೊರದೇಶದಿಂದ ಹರಿದುಬಂದ ಗ್ರೀಕ, ಸಿಥಿಯನ್, ಕುಶಾನ ಮೊದಲಾದ ವಿದೇಶೀಯರು ಹಿಂದೂ ಸಮಾಜದಲ್ಲಿ ಸೇರ್ಪಡೆ ಹೊಂದಿದರು. ಮೂರ್ತಿಪೂಜೆಯು ಬಲು ಆದ್ಯತೆಯಿಂದ ಮೆರೆಯಿತು. ಗುಪ್ತ ಅರಸರು ಗುಡಿಗುಂಡಾರಗಳಿಗೆ ಉಂಬಳಿ ನಡಿಸಿದರು. ವಿಧಿ, ನಿಷೇಧಗಳು ನಡಿದವು.

ಹಿಂದೀ ಶಿಲ್ಪಕಲೆಯು ಗುಪ್ತರ ಕಾಲಕ್ಕೆ ಅತ್ಯುನ್ನತ ಸ್ಥಿತಿಗೆ ಮುಟ್ಟಿತು. ಮತ್ತು ತನ್ನದೇ ಆದ ಒಂದು ವೈಶಿಷ್ಟ್ಯವನ್ನು ತೋರ್ಪಡಿಸಿತು. ಆಕೃತಿಗಳ ಸ್ವರೂಪ, ನಿಲ್ಲುವ ಭಂಗಿ, ರಚನೆಯಲ್ಲಿ ಸೊಬಗು ಇತ್ಯಾದಿಗಳು ಈಗಿನ ಕಾಲದ ವೈಶಿಷ್ಟ್ಯಗಳು.

ಪ್ರಶ್ನಾವಲಿ:—

(೧) ಕಾಲಿದಾಸನು ಕವಿಚಕ್ರವರ್ತಿಯು ಹೇಗೆ ?
(೨) ಗುಪ್ತ ಅರಸರು ಭಾರತೀಯ ಸಂಸ್ಕೃತಿಯನ್ನು ಹೇಗೆ ಬೆಳೆಸಿದರು ?
(೩) ಸ್ವರ್ಣಯುಗವೆಂದರೆ ಯಾವದು ? ಹಾಗೆ ಏಕೆ ಕರೆಯುವರು ?



# ೯. ಶ್ರೀಹರ್ಷನೂ ಪುಲಕೇಶಿಯೂ.

ಗುಪ್ತವಂಶದ ಕೊನೆಯ ಅರಸರು ಬಹಳ ದುರ್ಬಲರಾದ್ದರಿಂದ, ಹೂಣರೆಂಬ ಮಂಗೋಲ ಕುಲದ ಗುಂಪಿನವರು ಹಿಂದುಸ್ತಾನವನ್ನು ಪ್ರವೇಶಿಸಿ, ಹಿಂದೂ ರಾಜರನ್ನು ಧ್ವಂಸ ಮಾಡಿ ತಮ್ಮದೇ ಆದ ರಾಜ್ಯವನ್ನು ಸ್ಥಾಪಿಸಿದರು ಇವರ ಬೆನ್ನ ಹಿಂದೆಯೆ ಗುರ್ಜರರೆಂಬ ಮತ್ತೊಂದು ಕುಲದವರು ನುಗ್ಗಿದರು. ಹೂಣರ ಮುಖ್ಯನಾದ ತೋರಮಾನನೆಂಬವನು ರಾಜನಾದನು. ಗುಪ್ತರ ಸಾಮ್ರಾಜ್ಯವು ಹೂಣರ ಆಕ್ರಮಣದಿಂದಲೇ ಕ್ಷೀಣವಾಯಿತು.

ತೋರಮಾನನು ೫೦೦ರಲ್ಲಿ ಕಾಲವಾದನು. ಈತನ ಮಗ ಮಿಹಿರ-ಗುಲನು ಮಹಾ ಕ್ರೂರ ಸ್ವಭಾವದವನಾಗಿದ್ದನು. ಬೌದ್ಧ ಸನ್ಯಾಸಿಗಳ ಕೊಲೆಯೂ, ಆನೆಗಳನ್ನು ಕೋಡಗಲ್ಲಿನಿಂದ ಕಂದರದಲ್ಲಿ ತಳ್ಳುವದೂ ಈತನ ಆಟಗಳಾಗಿದ್ದವು. ಹೂಣ ಅರಸರು ಶಾಕಲ ನಗರ ಅಂದರೆ ಈಗಿನ ಶಿಯಾಲಕೋಟದಲ್ಲಿ ಆಳಿದರು

ಇವಳ ಉಪಟಳವನ್ನು ತಡೆಯಲಾರದೆ ಮಾಳವರೂ ಗುಪ್ತರೂ ಕೂಡಿ ಯಶೋಧರ್ಮ ಮತ್ತು ಬಾಲಾದಿತ್ಯರೆಂಬವರ ನೇತೃತ್ವದಲ್ಲ ಯುದ್ಧ ಹೂಡಿದರು. ಮಿಹಿರಗುಲನು ಸೋತು ಓಡಿಹೋಗಿ ಅರಣ್ಯದಲ್ಲಿ ಸತ್ತನು. ಮಿಹಿರಗುಲನ ಕಾಲಕ್ಕೆ ಹೂಣರು ಹಿಂದುಗಳಾಗಿದ್ದರೂ ಬಹಳ ಕಂಟಕರಾಗಿದ್ದರು. ಗಾಂಧಾರದಲ್ಲಿಯ ಬೌದ್ಧ ಮಠಗಳೂ, ತಕ್ಷಶಿಲೆಯ ವಿದ್ಯಾಪೀಠವು ಇವರಿಂದಲೇ ಹಾಳುಮಾಡಲ್ಪಟ್ಟವು.

ಇದೇ ಕಾಲದಲ್ಲಿ ವರ್ಧನನೆಂಬ ವಂಶತನವು ಸ್ಥಾನೇಶ್ವರದಲ್ಲಿ ತಲೆಯೆತ್ತಿತು. ಇಲ್ಲಿಯ ಪ್ರಭಾಕರವರ್ಧನನು ನೆರೆಯ ರಾಜನಾದ ಕನೋಜದ ಗ್ರಹವರ್ಮನಿಗೆ ತನ್ನ ಮಗಳಾದ ರಾಜ್ಯಶ್ರೀಯನ್ನು ಕೊಟ್ಟಿದ್ದನು. ಪ್ರಭಾಕರನ ಮಗನೇ ಹರ್ಷವರ್ಧನನು.

ಇವನು ಚಿಕ್ಕವನಿರುವಾಗಲೇ ಕ್ರಿ.ಶ. ೬೦೬ರಲ್ಲಿ ರಾಜ್ಯಭಾರ ವಹಿಸಬೇಕಾಯಿತು. ಇವನ ತಂಗಿಯಾದ ರಾಜ್ಯಶ್ರೀಯು ವಿಪತ್ತಿಗೆ ಸಿಕ್ಕು ಅರಣ್ಯದಲ್ಲಿ ತಿರುಗುತ್ತಿದ್ದಳು. ಆಕೆಯನ್ನು ಹುಡುಕಿ ಸುಖದಲ್ಲಿಡುವುದು ಇವನ



ರಾಜ್ಯಶ್ರೀಯು ಅಗ್ನಿಪ್ರವೇಶಕ್ಕೆ ಅಣಿಯಾದಾಗ ಶ್ರೀಹರ್ಷನು ಅವಳನ್ನು ತಡೆದದ್ದು.

ಆದ್ಯ ಕರ್ತವ್ಯವಾಗಿತ್ತು. ಅಡವಿಯಲ್ಲಿ ಅವಳು ಅಗ್ನಿಪ್ರವೇಶ ಮಾಡುವಾಗ ಅವಳನ್ನು ಸಂರಕ್ಷಿಸಿ ತಿರುಗಿ ರಾಜಧಾನಿಗೆ ಕರೆದುಕೊಂಡು ಬಂದನು. ಆಕೆಗೂ ಒಂದು ರಾಜ್ಯವಿತ್ತು. ಇಬ್ಬರೂ ಕೂಡಿ ವಿಸ್ತಾರ ಪಡೆದ ರಾಜ್ಯವಾಳಲು ಮೊದಲಿಟ್ಟರು.

**ರಾಜ್ಯ ವಿಸ್ತಾರ:—**

ಮೊದಲಿನ ಕಾಲದ ಕುರು ಪಾಂಚಾಲಗಳೆಂಬ ದೇಶಗಳೂ, ವಾಳವ ಪ್ರದೇಶವೂ, ಗಂಗಾನದಿಯ ದಕ್ಷಿಣ ಪ್ರದೇಶವೂ, ಹರ್ಷನ ಅಧೀನವಾಗಿದ್ದವು. ಬರಬರುತ್ತ ಇವನು ಆರ್ಯಾವರ್ತದಲ್ಲೆಲ್ಲ ದಂಡಯಾತ್ರೆಗೈದು, ವಿಜಯ ಯಾತ್ರೆಗಳನ್ನು ಮೂವತ್ತು ವರ್ಷ ಕಾಲ ನಡಿಸಿದನು. ಈಗಿನ ಉತ್ತರ ಹಿಂದುಸ್ತಾನವೆಂಬ ಭಾಗವೆಲ್ಲವೂ ಹರ್ಷನ ಆಧಿಪತ್ಯಕ್ಕೆ ಒಳಪಟ್ಟಿತ್ತು.

ಕೃ.ಶ. ೬೩೦ರಲ್ಲಿ ಹರ್ಷನು ನರ್ಮದೆಯ ದಂಡೆಗೆ ಬಂದು ದಕ್ಷಿಣದಲ್ಲಿ ಸಾಮ್ರಾಜ್ಯ ಬೆಳೆಸಬೇಕೆಂದು ಆಶೆಪಟ್ಟನು. ದಕ್ಷಿಣದ ಬಹು ಭಾಗವನ್ನು ಚಾಲುಕ್ಯರ ಇಮ್ಮಡಿ ಪುಲಕೇಶಿ ಎಂಬ ಮಹಾ ಪ್ರತಾಪಶಾಲಿಯು ಆಳುತ್ತಿದ್ದನು. ಇದನ್ನು ಕಂಡು ಈತನೂ ನರ್ಮದೆಯ ದಕ್ಷಿಣ ದಂಡೆಗೆ ಹೋಗಿ ತಳವೂರಿದನು. ಯುದ್ಧ ನಡೆದಿರುವದು ಸಂಶಯಾಸ್ಪದವು. ಫಲಿತಾಂಶವಾಗಿ, ಇಬ್ಬರೂ ನರ್ಮದೆಯನ್ನು ತಮ್ಮ ತಮ್ಮ ಸಾಮ್ರಾಜ್ಯಗಳ ಮೇರೆಯನ್ನಾಗಿ ಮಾಡಿಕೊಂಡರು.

ಹರ್ಷನು ಯುದ್ಧದಲ್ಲಿ ನಿಪುಣನಿದ್ದನಲ್ಲದೆ, ಕವಿಗಳಲ್ಲಿಯೂ, ವಿದ್ವಾಂಸರಲ್ಲಿಯೂ, ಕಲಾನಿಪುಣರಲ್ಲಿಯೂ ಅತಿಶಯ ಆದರ ತೋರಿದನು. ಸ್ವತಃ ಕವಿಯೂ ಇದ್ದನು. ಎಲ್ಲ ಮತಸ್ಥರನ್ನೂ ಸಮಾನವಾಗಿ ನೋಡಿದನು. ಯಜ್ಞಗಳನ್ನು ನಡಿಸಲಿಲ್ಲ ಸತ್ರಗಳನ್ನೂ, ಚಿಕಿತ್ಸಾಲಯಗಳನ್ನೂ, ಜಲಾಶಯಗಳನ್ನೂ ನಿರ್ಮಿಸುತ್ತ, ಧರ್ಮಪ್ರಚಾರಕ್ಕೆ ವಿಶೇಷ ಪ್ರೋತ್ಸಾಹನೆ ಕೊಟ್ಟನು. ನಿಯಮಿತ ಕಾಲಕ್ಕೆ ಬೊಕ್ಕಸದ ಹಣವನ್ನು ದಾನ ಮಾಡುತ್ತಿದ್ದನು ಇವನ ಕಾಲಕ್ಕೆ ಹುಎನ್-ಸ್ಯಾಂಗ ಎಂಬ ಚೀನಿ ಪ್ರವಾಸಿಯು ಭಾರತಕ್ಕೆ ಬಂದು ಹೋದನು.

**ಪುಲಕೇಶಿಯು —**

ಆರನೇ ಶತಮಾನದ ಆದಿಯಲ್ಲಿ ಜಯಸಿಂಹನೆಂಬ ಚಾಲುಕ್ಯ ಕುಲಸ್ಥನು ರಟ್ಟರನ್ನು ಸೋಲಿಸಿ ರಾಜ್ಯ ಕಟ್ಟಿದನು.

ಆತನ ತರುವಾಯ ಹಿರೇ ಪುಲಕೇಶಿಯು ಬಾದಾಮಿಯಲ್ಲಿ ಆಳಿದನು. ಸತ್ಯಾಶ್ರಯ, ಪೃಥ್ವೀವಲ್ಲಭ ಮುಂತಾದ ಬಿರುದು ಪಡೆದನು. ಈ ರಾಜವಂಶದಲ್ಲಿ ಅಧಿಕನಾದ ೨ ನೇ ಪುಲಕೇಶಿಯು ೬೦೯ ರಲ್ಲಿ ಪಟ್ಟವೇರಿದನು. ಈತನು

ನರ್ಮದೆಯಿಂದ ಕಾವೇರಿಯ ವರೆಗೆ ಇರುವ ಭಾಗವನ್ನೆಲ್ಲ ಸ್ವಸಾಮರ್ಥ್ಯ
ದಿಂದ ಗೆದ್ದು, ದಕ್ಷಿಣದ ಸಮಸ್ತ ಭಾಗಗಳಲ್ಲಿಯೂ ತನ್ನ ಒಡೆತನ ನಡಿಸಿ
ದನು. ದಕ್ಷಿಣಾಪಥೇಶ್ವರ, ಪರಮೇಶ್ವರ ಎಂಬ ಬಿರುದುಗಳನ್ನು ಧರಿಸಿ
ದನು. ಇವನೇ ಹರ್ಷನನ್ನು ಎದುರಿಸಿದವನು. ಚಾಲುಕ್ಯರು ಇತರ
ಹಿಂದೂ ಅರಸರಂತೆ ವೈದಿಕ ಮತವನ್ನೇ ಅವಲಂಬಿಸಿದರು. ಪರಧರ್ಮ
ಸಹಿಷ್ಣುಗಳೂ ಆಗಿದ್ದರು. ದಕ್ಷಿಣದ ಜನಸಾಮಾನ್ಯರಲ್ಲಿ ಜೈನ ಮತವೇ
ಪ್ರಸಾರದಲ್ಲಿತ್ತು. ದಕ್ಷಿಣಾಪಥಕ್ಕೆಲ್ಲ ಒಡೆಯರಾದ್ದರಿಂದ, ಪಶ್ಚಿಮ ಕರಾ-
ವಳಿಯ ಬಂದರಗಳೆಲ್ಲ ಚಾಲುಕ್ಯರ ಕೈಯಲ್ಲಿದ್ದುದರಿಂದ ಆಗ ನಡೆಯುವ
ಎಲ್ಲ ಪರದೇಶದ ವ್ಯಾಪಾರವು ಇವರ ಕೈಯಲ್ಲಿತ್ತು ಆದ್ದರಿಂದ ಧನ, ಕನಕ
ಸಂಪತ್ತು ವಿಪುಲವಾಗಿ ಬೆಳೆಯಿತು.

ಚಾಲುಕ್ಯರು ಹಿಂದೂ ಮತಸ್ಥರಾಗಿ ಬ್ರಹ್ಮ, ವಿಷ್ಣು, ಮಹೇಶ್ವರರಿಗೆ
ದೇವಾಲಯಗಳನ್ನು ಕಟ್ಟಿಸುತ್ತಲೂ, ಜೈನ ಮತಸ್ಥರಿಗೆ ವಿಶೇಷ ಸಹಾಯ
ಮಾಡುತ್ತಲೂ ಇದ್ದರು. ಇಮ್ಮಡಿ ಪುಲಕೇಶಿಯ ಆಸ್ಥಾನದಲ್ಲಿ ರವಿಕೀರ್ತಿ
ಯೆಂಬ ಕವಿಯಿದ್ದನು. ಚಾಲುಕ್ಯರು ಕನ್ನಡ ನುಡಿಯನ್ನು ಬಳಸಿದರು.
ಶಾಸನಗಳೂ ಇದೇ ಭಾಷೆಯಲ್ಲಿ ಇವೆ

ಚಿತ್ರಕಲೆಗೂ, ಶಿಲ್ಪಕಲೆಗೂ ಇವರು ಬಹಳ ಪ್ರೋತ್ಸಾಹನೆ ಕೊಟ್ಟರು.
ಬಾದಾಮಿಯ ಬಸದಿಗಳು, ಅಜಂತೆಯ ಚಿತ್ರಗಳು, ಎಲಿಫಂಟಾದ ಗುಹೆಗಳು
ಬಹಳ ಹೆಸರಾದವು.

ಜನಸಾಮಾನ್ಯರಲ್ಲಿ ಉತ್ಸವಾದಿಗಳು ಬೆಳೆದು ಸಂಸ್ಕೃತ ವ್ಯಾಸಂಗವು
ಬೆಳೆಯಿತೆಂದು ಹಿಂದೆ ಹೇಳಿದೆಯಷ್ಟೆ? ಬೌದ್ಧ-ಹಿಂದೂ ಮತತತ್ವಗಳು
ಒಟ್ಟಿಗೆ ಸೇರಿ, ಹಿಂದೂಧರ್ಮವೆಂಬ ಮತಧರ್ಮವು ಸಿದ್ಧವಾಯಿತು. ಜನ
ರೊಳಗೆ ಶಾಂತಿ, ಸಹನೆ, ಗೌರವಗಳು ಬೆಳೆದು, ಬ್ರಾಹ್ಮಣ ಗುರುಗಳು ಬೌದ್ಧ
ಮತತತ್ವಗಳನ್ನೂ, ನೀತಿಗಳನ್ನೂ ಉಪದೇಶಿಸಿದರು. ಬೌದ್ಧ ವಿದ್ವಾಂಸರು
ಸಂಸ್ಕೃತ ಭಾಷೆಯನ್ನೂ, ಪುರಾತನ ತತ್ವಗ್ರಂಥಗಳನ್ನೂ ಬೋಧಿಸುತ್ತಿದ್ದರು.

ದೇವಾಲಯಗಳು, ಮೂರ್ತಿಪೂಜೆ, ಉತ್ಸವಾದಿಗಳು ಹೆಚ್ಚಿ,
ಆಸ್ತಿಕ್ಯವು ಹೆಚ್ಚು ದೃಢವಾಗಿ, ಮೂಢವಾದ ಆಚಾರಗಳು ಜನರ ಮನಸ್ಸಿ

ನಲ್ಲಿ ಭದ್ರವಾಗಿ ನೆಲೆಗೊಂಡವು. ನಾನಾ ರೀತಿಯಲ್ಲಿ ಬೆಳೆದ ಈ ಮೌಢ್ಯ ವನ್ನು ಶಂಕರಾಚಾರ್ಯರೆಂಬ ಮಹಾಪುರುಷರು ನಾಶಗೊಳಿಸಿ ಜನರನ್ನು ಸುಸಂಸ್ಕೃತಗೊಳಿಸಿದರು.

ಹು-ಎನ್-ಸ್ತಾಂಗನು ಬಾದಾಮಿಗೂ ಭೇಟ್ಟಿ ಕೊಟ್ಟನು. ತಾನು ಭಾರತದಲ್ಲಿ ಕಂಡದ್ದನ್ನು ಬರೆದಿಟ್ಟಿರುವನು.

**ಪ್ರಶ್ನಾವಲಿ:—**

(೧) ಹರ್ಷ ಮತ್ತು ಪುಲಕೇಶಿಯರು ತಮ್ಮ ರಾಜ್ಯಗಳ ಎಲ್ಲೆಯನ್ನು ಹೇಗೆ ಗೊತ್ತುಪಡಿಸಿಕೊಂಡರು ?

(೨) ಹರ್ಷ ಮತ್ತು ಪುಲಕೇಶಿಯರ ಕಾಲಕ್ಕೆ ಯಾವ ಪ್ರವಾಸಿಯು ಬಂದಿ ದ್ದನು ? ಹಿಂದುಸ್ಥಾನದ ಬಗೆಗೆ ಅವನು ಬರೆದಿಟ್ಟದ್ದೇನು ?

(೩) ಹರ್ಷನು ಬುದ್ಧಮತದೇಳಿಗೆಗೆ ಏನು ಪ್ರಯತ್ನ ಮಾಡಿದನು ?

---

## ೧೦ ಶ್ರೀ ಶಂಕರಾಚಾರ್ಯರು

ಗುಪ್ತ ಅರಸರ ಆಳಿಕೆಯಲ್ಲಿ [illegible] ನಡೆದು, ವೈದಿಕ ಧರ್ಮವು ಪ್ರ[illegible] ವನ್ನು ಸುಸಂಘಟಿತವಾಗಿ ಪುನರುಜ್ಜೀವ[illegible] ರ್ಯರು ಅಗ್ರಗಣ್ಯರು. ಭಾರತದಲ್ಲಿ [illegible] ವನ್ನು ಜನತೆಗೆ ತಿಳಿಸಿ ಹೇಳಿದ ಆಚಾರ್ಯತ್ರಯರಲ್ಲಿ ಇವರೇ ಮೊದಲಿಗರು.

ಶ್ರೀ ಶಂಕರಾಚಾರ್ಯರು ಜೀವಿಸಿದ ಕಾಲದ ವಿಷಯವಾಗಿ ಪಂಡಿತ ರಲ್ಲಿ ವಾದವಿದೆ. ಅದೇನಿದ್ದರೂ ಕೇರಳ ದೇಶದ ಪೂರ್ಣಾ ನದಿಯ ದಂಡೆ ಯಲ್ಲಿರುವ ಕಾಲಟಿ ಗ್ರಾಮದಲ್ಲಿ ಶ್ರೀ ಶಿವಗುರು ಎಂಬ ಧರ್ಮನಿಷ್ಠ ವಿದ್ವಾಂ ಸನಾದ ಬ್ರಾಹ್ಮಣನ ಮಡದಿ, ಸುಭದ್ರಾದೇವಿಯ ಉದರದಲ್ಲಿ ಇವರು ಜನ್ಮ ವೆತ್ತಿದರು. ಬಹು ದಿವಸ ಮಕ್ಕಳಾಗದ್ದಕ್ಕೆ ಶಿವಗುರುವು ಭಗವಾನ್ ಶಂಕರ ನನ್ನು ಪ್ರಾರ್ಥಿಸಿ ಒಂದು ಪುತ್ರರತ್ನವನ್ನು ಪಡೆದನೆಂದು ಹೇಳಿಕೆಯುಂಟು.

ಈ ಪುತ್ರರತ್ನವು ದೇವಾಧಿದೇವ ಶಂಕರನ ಅವತಾರವೆಂದೂ ಹೇಳಿಕೆಯುಂಟು.

ಚಿಕ್ಕಂದಿನಿಂದಲೇ ಬಾಲಕ ಶಂಕರನು, ತಾನು ಅವತಾರಿಕ ಪುರುಷನೆಂಬ ಕುರುಹುಗಳನ್ನು ತೋರಹತ್ತಿದನು. ಜನ್ಮವೆತ್ತಿ ೧ನೆಯ ವರ್ಷದಲ್ಲಿ ಸ್ಪಷ್ಟವಾಗಿ ಮಾತಾಡಹತ್ತಿದನು. ೩ನೆಯ ವರ್ಷದಲ್ಲಿ ತಾಯಿಯಿಂದ ಕೇಳಿದ ಪುರಾಣದ ಕಥೆಗಳನ್ನು ಕಂಠಪಾಠ ಮಾಡಿದ್ದು, ಉಪನಯನವಾದ ನಂತರ



ಶ್ರೀ ಶಂಕರಾಚಾರ್ಯರು.

ಕೇವಲ ೭ ವರ್ಷದವನಿದ್ದಾಗ ಗುರುಗಳಲ್ಲಿ ವೇದ, ವೇದಾಂತ ಶಾಸ್ತ್ರಗಳನ್ನು ಕಲಿತದ್ದು, ಮುಂತಾದವು ಜನರಿಗೆ ಅಚ್ಚರಿಯನ್ನುಂಟುಮಾಡಿದವು. ಈ ರೀತಿ ಶ್ರೀ ಶಂಕರನ ಅಸಾಧಾರಣ ಪ್ರತಿಭೆಯನ್ನು ಕಂಡು ಅವನ ಗುರುಗಳೂ ಚಕಿತರಾದರು.

ವಿದ್ಯಾಭ್ಯಾಸದ ನಂತರ ಗೃಹಸ್ಥಾಶ್ರಮಿಯಾಗದೆ ಶ್ರೀ ಶಂಕರಾಚಾರ್ಯರು. ಸನ್ಯಾಸ ದೀಕ್ಷೆ ಪಡೆಯಲು ಅಪೇಕ್ಷಿಸಿದರು. ಆದರೆ ತಂದೆ

ವಾದ್ದರಿಂದ ಮತ್ತು ದೇಶವ್ಯಾಪಿಯಾದ ಬೌದ್ಧ, ಚಾರುವಾಕ ಮತ್ತು ಕಾಪಾಲಿಕ ಮತಗಳು ಇಳಿಮುಖವಾದ್ದರಿಂದ ಶ್ರೀ ಶಂಕರ ಪ್ರಣೀತ ವೈದಿಕ ಮತವು ಜನತೆಯಲ್ಲಿ ಆಳವಾಗಿ ಬೇರೂರಿತು.

ಪ್ರಶ್ನಾವಲಿ:—

(೧) ಶಂಕರಾಚಾರ್ಯರು ವೈದಿಕ ಮತದ ಪುನರುದ್ಧಾರವನ್ನು ಹೇಗೆ ಮಾಡಿದ ರೆಂಬುದನ್ನು ಬರೆಯಿರಿ.

(೨) ಶಂಕರಾಚಾರ್ಯರು ಅವತಾರಿಕ ಪುರುಷರೆಂಬುದನ್ನು ಸಮರ್ಥಿಸಿ ಅಥವ ಟೀಕಿಸಿ ಕೆಲವು ವಾಕ್ಯಗಳನ್ನು ಬರೆಯಿರಿ.

(೩) ಶಂಕರಾಚಾರ್ಯರಿಗೆ ಯಾವ ಮತಸ್ಥರು ವಿರೋಧಿಗಳಾಗಿದ್ದರು ಮತ್ತು ಅವರನ್ನು ಆಚಾರ್ಯರು ಹೇಗೆ ಹಿಮ್ಮೆಟ್ಟಿದರು ?

---

# ೧೧. ಇಸ್ಲಾಂ ಮತದ ಉದಯ

ಅಶೋಕ ಮತ್ತು ಹರ್ಷನಂತಹ ರಾಜರು ಬೌದ್ಧ ಧರ್ಮವನ್ನು ಭಾರತದ ರಾಜಕೀಯ ಜೀವನದೊಡನೆ ಹೇಗೆ ಬೆರೆಸಿಕೊಂಡರೆಂಬುದನ್ನು ಕಂಡದ್ದಾಯಿತು. ಯುರೋಪದಲ್ಲಿ ಕ್ರಿಸ್ತಮತವೂ ರಾಜಕೀಯ ಜೀವನಕ್ಕೆ ಸರಿಪಡಿಸಿಗೊಂಡಿತೆಂಬುದನ್ನು ಅರಿತೆವು ಈಗ ಮತ್ತೊಂದು ಧರ್ಮವು ಅರಬಸ್ತಾನದಲ್ಲಿ ತಲೆಯೆತ್ತಿ ರಾಜಕೀಯ ರಂಗದಲ್ಲಿ ಪ್ರವೇಶಿಸಿದ್ದನ್ನು ಕಾಣು ವೆವು. ಇದೇ ಇಸ್ಲಾಂ ಮತ. ಇದರ ಸ್ಥಾಪಕನು ಹಜರತ ಮುಹಮ್ಮದ ಎಂಬಾತನು.

ಕ್ರಿ. ಶ. ೫೭೦ರಲ್ಲಿ ಅರಬಸ್ತಾನದ ಮಕ್ಕಾ ಪಟ್ಟಣದಲ್ಲಿಯ ಕಾಬಾ ದೇವಸ್ಥಾನದ ಪೂಜಾರಿಗಳ ಮನೆತನದಲ್ಲಿ ಮುಹಮ್ಮದನ ಜನ್ಮವಾಯಿತು. ತಾಯಿಯ ಹೊಟ್ಟೆಯಲ್ಲಿರುವಾಗಲೇ ತಂದೆಯನ್ನು ಕಳೆದುಕೊಂಡನು. ಮಹಮ್ಮದನು ೬ ವರ್ಷದವನಿರುವಾಗಲೇ ತಾಯಿಯು ಗತಿಸಿ ಹೋದಳು. ಓದು ಬರಹ ಕಲಿಯಲಿಲ್ಲ. ಚಿಕ್ಕಂದಿನಿಂದ ಮುಹಮ್ಮದನು ಉಪಜೀವನ

ಕ್ಕಾಗಿ ಕುರಿ ಮಂದೆಯನ್ನು ಮೇಯಿಸಿಕೊಂಡಿದ್ದನು. ಸುಮಾರು ೨೭ ವರ್ಷ ದವನಿದ್ದಾಗ ಖದೀಜಾ ಎಂಬ ಸಿರಿವಂತ ವಿಧವೆಯನ್ನು ಮದುವೆಯಾದನು. ಅವಳ ವ್ಯಾಪಾರವನ್ನು ಮುಂದುವರಿಸಲು ಮಹಮ್ಮದನು ಒಂಟೆ ಸಾರಿಗೆಯ ಸಂಗಡ ಸಂಚಾರ ಸಾಗಿಸಿದನು. ಖದೀಜೆಯಿಂದ ಮಹಮ್ಮದನಿಗೆ ೪ ಹೆಣ್ಣು ಮಕ್ಕಳೂ, ೨ ಗಂಡು ಮಕ್ಕಳೂ ಆದವು.

ಈ ಕಾಲದಲ್ಲಿ ಅರಬರು ಬಹು ಶೋಚನೀಯ ಸ್ಥಿತಿಯಲ್ಲಿದ್ದರು. ತಮ್ಮ ತಮ್ಮೊಳಗಿನ ದ್ವೇಷಾಸೂಯೆಗಳು, ಸಮಾಜದಲ್ಲಿ ರೂಢವಾಗಿದ್ದ ವ್ಯಸನಗಳು, ಇವರನ್ನು ಕಾಡು ಜನರ ಸ್ಥಿತಿಗೆ ತಂದಿದ್ದವು. ಕುಡಿತ, ಜೂಜಾಟ, ಶಿಶುವಧೆ ಪಶುವಧೆಗಳು ಅಂದಿನ ಅರಬರಲ್ಲಿ ಸಾಮಾನ್ಯವಾಗಿದ್ದವು. ಸ್ತ್ರೀಯರಿಗೆ ಸಮಾಜದಲ್ಲಿ ಯಾವ ಸ್ವಾತಂತ್ರ್ಯವೂ ಇದ್ದಿಲ್ಲ. ವ್ಯಾಪಾರಕ್ಕಾಗಿ ಸುತ್ತಾಡು ವಾಗ ಅರಬರಿಗೆ ಸಂಪರ್ಕ ಬಂದ ಕ್ರಿಸ್ತ, ಪಾರ್ಸಿ, ಮತ್ತು ಹಿಬ್ರೂ ಧರ್ಮ ಗಳು ಇವರ ಮೇಲೆ ಯಾವ ಪರಿಣಾಮವನ್ನೂ ಮಾಡಿದ್ದಿಲ್ಲ. ಆಗಿನ ಅರಬರು ಅಸಂಖ್ಯ ದೇವತೆಗಳನ್ನು ಪೂಜಿಸುತ್ತಿದ್ದರು.

ತನ್ನ ಜನರ ಸ್ಥಿತಿ, ಮತ್ತು ಸಂಚಾರದಲ್ಲಿ ತಾನು ಕಂಡ ಇತರ ಜನಾಂ ಗಗಳ ಸ್ಥಿತಿಗಳನ್ನು ತಿಳಿದು ಮಹಮ್ಮದನು ವಿಚಾರ ಮಾಡತೊಡಗಿದಂತೆ ಕಾಣುವದು. ಮತ್ತು ಅರಬ ದೇಶದ ನಿಶ್ಶಬ್ದವಾದ, ವಿಸ್ತಾರವಾದ ಮಳಲುಗಾಡುಗಳೂ, ಅವುಗಳಲ್ಲಿ ಉರಿಯುವ ಮಧ್ಯಾಹ್ನದ ಬಿಸಿಲಲ್ಲಿ ತಾನೊಬ್ಬನೆ ಏಕಾಕಿಯಾಗಿರುವ ಪ್ರಸಂಗಗಳೂ ಮಹಮ್ಮದನಲ್ಲಿ ದೇವರ ಕಲ್ಪನೆಯನ್ನು ಜಾಗ್ರತಗೊಳಿಸಿದವು. ಬರಬರುತ್ತ ಇವನಲ್ಲಿ ಈ ಕಲ್ಪನೆಯು ದೃಢವಾಯಿತು. ಮುಂದೆ ಇವನೇ ದೇವದೂತನೆಂದು ಯಾರೋ ಹೇಳಿ ದಂತೆ ಇವನಿಗೆ ಕೇಳಿಸಿತು. ಅಂದಿನಿಂದ ಇವನ ಮನವು ಕಲ್ಲೋಲ ಗೊಂಡಿತು. ಈ ವೇಳೆಯಲ್ಲಿ ಖದೀಜಳು ಇವನಿಗೆ ಶಾಂತತೆಯನ್ನು ತಂದು ಕೊಟ್ಟಳು. ಖದೀಜಳನ್ನೊಳಗೊಂಡು ಇವನಿಗೆ ಕೆಲ ಜನ ಶಿಷ್ಯರು ತಲೆ ದೋರಿದರು. ಇನ್ನಿತರರಿಂದ ತೋರಿಬರುವ ವೈರಭಾವವನ್ನು ಹೊಡೆದೋ ಡಿಸಲು ಮಹಮ್ಮದನು ಬಹಿರಂಗವಾಗಿಯೆ ತನ್ನ ಧರ್ಮವನ್ನು ಬೋಧಿಸ ಹತ್ತಿದನು.

ಅನುಯಾಯಿಗಳ ಸಂಖ್ಯೆ ಬೆಳೆದಂತೆ ಮಹಮ್ಮದನು ಕಾಬಾದಲ್ಲಿ ನಡೆಯುತ್ತಿದ್ದ ವಿಗ್ರಹಾರಾಧನೆಯನ್ನು ಖಂಡಿಸತೊಡಗಿದನು. ಇದನ್ನು ಕಂಡು ಜನರಲ್ಲಿ ಭೀತಿಯುಂಟಾಯಿತು. ಅವರು ಇವನ ಸಂಗಡಿಗರನ್ನೂ ಇವನನ್ನೂ ದಂಡಿಸುವ ಯೋಚನೆ ನಡಿಸಿದರು. ಈ ಗೊಂದಲ ನಡೆದಾಗ ಮದೀನಾ ಎಂಬ ನೆರೆಯೂರಿನವರ ಆಮಂತ್ರಣದ ಮೇರೆಗೆ ಮಹಮ್ಮದನು ತನ್ನ ಶಿಷ್ಯರಿಂದೊಡಗೂಡಿ ಮದೀನೆಗೆ ಪಲಾಯನ ಮಾಡಿದನು. ಇದು ಕ್ರಿ. ಶ. ೬೨೨ರಲ್ಲಿ ನಡೆಯಿತು. ಈ ಪಲಾಯನದ ದಿನದಿಂದ "ಹಿಜರಿ" ಶಕವು ಪ್ರಾರಂಭವಾಯಿತು

ಮುಂದೆ ಮಕ್ಕಾ ಮದೀನಾಗಳ ಜನರಲ್ಲಿ ಯುದ್ಧವೆ ನಡೆಯಿತು. ಕೊನೆಗೆ ಒಪ್ಪಂದವಾಗಿ ಮಹಮ್ಮದನ ಅರಸುತನವನ್ನು ಒಪ್ಪಿಕೊಂಡದ್ದಾಯಿತು. ಮಹಮ್ಮದನು ಪೈಗಂಬರನೆನಿಸಿ ಮಕ್ಕೆಗೆ ತೆರಳಿದನು. ಮುಂದೆ ಇವನು ಸಾಹಸ, ಸಮರ ಮುಂತಾದವುಗಳಿಂದ ಅರೇಬಿಯದ ಅರಸನೇ ಆದನು. ನಂತರ ಕೆಲವು ದಿನಗಳಲ್ಲಿ ಖದೀಜೆಯು ತೀರಿಕೊಳ್ಳಲು ಮಹಮ್ಮದನು ಬೇರೆ ಇಬ್ಬರು ಮಡದಿಯರನ್ನು ವರಿಸಿದನು. ಅನೆರಲ್ಲಿ ಹುಟ್ಟಿದ ಮನಸ್ತಾಪವೆ, ಇವನ ತರುವಾಯ ಇಸ್ಲಾಂ ಮತದಲ್ಲಿ ಪಂಗಡಗಳನ್ನು ನಿರ್ಮಾಣ ಮಾಡಿತು. ಪೈಗಂಬರರು ಕ್ರಿ. ಶ ೬೩೨ ರಲ್ಲಿ ಪರಲೋಕವಾಸಿಯಾದರು.

### ಇಸ್ಲಾಂ ಮತದ ತತ್ವಗಳು:—

ಸರ್ವಜ್ಞನೂ, ಸರ್ವಶಕ್ತನೂ, ಅದೃಶ್ಯನೂ ಆದ ಜಗದೀಶ್ವರನು ಒಬ್ಬನೇ ಎಂಬುದು ಈ ಮತದ ಪ್ರಥಮ ತತ್ವವು. ತಮ್ಮಂತಹ ದೇವದೂತರು ಸಾರುವ ಸಂದೇಶಗಳ ಮೇಲೆ ವಿಶ್ವಾಸವಿಟ್ಟವರಿಗೆ ಕೊನೆಗೆ ಸ್ವರ್ಗವು ಸಿಗುವದು. ವಿಶ್ವಾಸಹೀನರಾದವರು ನರಕಕ್ಕೆ ಬೀಳುವರು. ನಿತ್ಯಜೀವನದಲ್ಲಿ ನೀತಿಯ ಮಟ್ಟವನ್ನು ಕುರಾಣದಲ್ಲಿ ಅಡಕವಾದ ಪೈಗಂಬರರ ವಚನಗಳು ಸಾರುತ್ತವೆ. ಮುಸಲ್ಮಾನರು ತಮ್ಮತಮ್ಮೊಳಗೆ ಸೋದರಭಾವವನ್ನು ತಳೆದಿರುವದುಚಿತವು. ಇದಕ್ಕೆ ಬಡತನ ಸಿರಿವಂತಿಕೆಗಳು ಅಡ್ಡ ಬರಬಾರದು.

ಇಸ್ಲಾಂ ಮತದ ವಿಸ್ತಾರ --

ಪೈಗಂಬರರ ನಂತರದಲ್ಲಿ ಬಂದ "ಖಲೀಫರು"—ಆ ಮೇಲೆ ಬಂದ ವರು—ತಮ್ಮ ರಾಜ್ಯದ ಗಡಿಗಳನ್ನು ವಿಸ್ತರಿಸಿದರು. ಕಾನ್‌ಸ್ಟಾಂಟಿನೋಪಲ್ ಮತ್ತು ಇತರ ಐದ ರಾಜ್ಯಗಳನ್ನು ಕೈವಶ ಪಡಿಸಿಕೊಂಡರು. ೩ನೆಯ ಖಲೀಫನ ಕಾಲದಷ್ಟರಲ್ಲಿಗೆ ಅರಬರು ಇಜಿಪ್ತ, ಸಿರಿಯಾ, ಮಸೊಪೊಟೇಮಿಯಾ, ಆಫ್ರಿಕದ ಉತ್ತರದ ತೀರ, ಅರ್ಮೇನಿಯಾ, ಕೊನೆಗೆ ಸ್ಪೇನದೇಶಗಳ ವರೆಗೂ ಹಬ್ಬಿದರು ಇತ್ತ ಹಿಂದುಸ್ಥಾನದ ವರೆಗೆ ಕಾಲು ಚಾಚಿದರು- ಕ್ರಿ. ಶ. ೭೧೨ ರಲ್ಲಿ ಖಲೀಫರಿಂದ ಪ್ರೇರಿತನಾದ ಮಹಮ್ಮದ ಬಿನ್ ಕಾಸೀಮು ಎಂಬವನು ಸಿಂಧ ಪ್ರಾಂತದಲ್ಲಿ ನುಗ್ಗಿ ಅಲ್ಲಿ ತನ್ನ ದೊರೆತನವನ್ನು ಸ್ಥಾಪಿಸಲು ಯತ್ನಿಸಿದನು.

ಪ್ರಶ್ನಾವಲಿ:—

(೧) ಧರ್ಮವಿಸ್ತಾರ ರಾಜ್ಯವಿಸ್ತಾರಗಳು ಮಹಮ್ಮದೀಯರಲ್ಲಿ ಹೇಗೆ ಒಂದುಗೂಡಿದವು ?

(೨) ಪೈಗಂಬರರ ಕುರಾಣದಲ್ಲಿ ಹೇಳಿದ ತತ್ವಗಳಾವವು ?

(೩) ಹಿಂದುಸ್ಥಾನಕ್ಕೆ ಮೊದಲು ಬಂದ ಮುಹಮ್ಮದೀಯನು ಯಾರು ?

---

# ೧೨. ರಜಪೂತರು

ಕ್ರಿ. ಶ. ದ ೭ನೆಯ ಮತ್ತು ೮ನೆಯ ಶತಕಗಳು ಭಾರತದ ಇತಿಹಾಸದಲ್ಲಿ ಮಹತ್ವದ ಬಡಲಾವಣೆಗಳನ್ನು ಮಾಡಿದವೆನ್ನಬಹುದು ಈ ಕಾಲದಲ್ಲಿ ಜನ್ಮವೆತ್ತಿದ ಶ್ರೀ ಶಂಕರಾಚಾರ್ಯರು ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸಿದರು. ಇದೇ ಕಾಲದಲ್ಲಿ ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ರಜಪೂತ ಮನೆತನಗಳು ಅಲ್ಲಲ್ಲಿ ತಲೆಯೆತ್ತಿ ರಾಜ್ಯಕಟ್ಟಿಕೊಂಡವು. ದಕ್ಷಿಣದಲ್ಲಿ ಆಳಿದ ಮನೆತನಗಳಲ್ಲಿ ಚಾಲುಕ್ಯ, ರಾಷ್ಟ್ರಕೂಟ,

ಯಾದವ ಮನೆತನಗಳು ಒಳ್ಳೆ ಹೆಸರಾದವು ಉತ್ತರದಲ್ಲಿ ಮೇವಾರದ ಪ್ರದೇಶದಲ್ಲಿ ಶಿಶೋದಿಯಾ ಮನೆತನವು ಪ್ರಸಿದ್ಧಿಗೆ ಬಂದಿತು. ಇವರಂತೆ ಕಚ್ಛವಘಾತ, ಗಾಹಡವಾಲ, ವಾಘೇಲ, ಚಂದೇಲ ಪರಮಾರ, ಪ್ರತಿಹಾರಿ, ಹೈಹಯ ಮುಂತಾದ ಮನೆತನಗಳು ಅಲ್ಲಲ್ಲಿ ತಲೆಯೆತ್ತಿದವು.

ಇವರ ಮೂಲವು ಪಂಡಿತರಲ್ಲಿ ವಾದವನ್ನು ಹುಟ್ಟಿಸಿದೆ. ಇದರಲ್ಲಿ ಕೆಳಗೆ ಕಂಡ ಮತಗಳು ಬೆಳಕಿಗೆ ಬಂದಿವೆ

(೧) ಆರ್ಯಾವರ್ತದಲ್ಲಿ ಗುಂಪುಗುಂಪಾಗಿ ಪ್ರವೇಶಿಸಿದ ತುಖಾರ, ಗುರ್ಜರ, ಹೂಣ ಕುಲಗಳ ವಂಶಸ್ಥರೇ ರಜಪೂತರು.



ಒಬ್ಬ ರಜಪೂತ ವೀರನು.

(೨) "ರಾಜಪುತ್ರರು" ಸೂರ್ಯ ಚಂದ್ರ ವಂಶದವರು. ಅಂದರೆ ಆರ್ಯಕುಲದವರು. ಅವರಲ್ಲಿ ಮ್ಲೇಂಛ ಸಂಪರ್ಕವಿಲ್ಲ. ಎಂಬುವುದು ಎರಡನೇ ಅಭಿಪ್ರಾಯವು.

(೩) ಮಹಾಭಾರತ ಕಾಲದಿಂದಲೂ ನಡೆದು ಬಂದ ಕ್ಷತ್ರಿಯ

ಕುಲಗಳು ಕಾರಣಾಂತರದಿಂದ ಅಳಿತುಕೊಂಡು ಈಗ ಕಾಣಿಸಿಕೊಂಡವರು ರಜಪೂತರೆನಿಸಿದರು.

ಏನಿದ್ದರೂ, ರಜಪೂತರ ಚರಿತ್ರೆಯು ಅತ್ಯಂತ ಮನೋರಂಜಕವಾಗಿದೆ. ಶೌರ್ಯ ಸಾಹಸಗಳಿಗೂ, ಪರಂಪರಾಗತ ವೀರ್ಯ ಔದಾರ್ಯಗಳಿಗೂ, ಮಾನ ಸಂಚಯಕ್ಕೂ ರಾಜಪುತ್ರರು ಇಡೀ ಪ್ರಪಂಚದಲ್ಲಿಯೇ ಅಗ್ರಗಣ್ಯರಾದರು. ಇವರ ಸ್ವದೇಶ, ಸ್ವಕುಲಾಭಿಮಾನಗಳು ನಿರುಪಮವಾದುವು ಇಂಥ ಅಭಿಮಾನವೇ ಅಕಾಲಿಕ ಕದನಗಳಿಗೂ, ಯುದ್ಧಗಳಿಗೂ ಕಾರಣವಾಗಿ ರಕ್ತದ ಕಾಲುವೆಗಳು ಹರಿದವು. ರಜಪೂತ ಕುಲಗಳು ಜಗತ್ತನ್ನು ಬೆರಗುಗೊಳಿಸುವಂಥ ಕೆಲವು ಸಂಗತಿಗಳನ್ನು ಜರುಗಿಸಿದವು ಅವುಗಳಲ್ಲಿ ಮುಖ್ಯವಾದವುಗಳು ಜೋಹರ ಮತ್ತು ಕೇಸರಿಯಾ.

**ಜೋಹರ:—**

ವೈರಿಗಳ ಕೂಡ ಯುದ್ಧ ಮಾಡುವಾಗ ಕೊನೆಯ ಪ್ರಸಂಗದಲ್ಲಿ ಪಟ್ಟಣದ ಎಲ್ಲ ಯುದ್ಧಾಳುಗಳು ಹೊರಡಲು ಸಿದ್ಧರಾಗುತ್ತಿದ್ದರು. ಪಟ್ಟಣದ ವನಿತೆಯರೆಲ್ಲ ಗಂಡಸರಿಗೆ ಜಯವನ್ನು ಕೋರಿ ಯುದ್ಧರಂಗಕ್ಕೆ ಕಳಿಸುತ್ತಿದ್ದರು. ತಾವು ವೈರಿಗಳ ಕೈಗೆ ಬೀಳಬಾರದೆಂದು, ಊರ ಮಧ್ಯದಲ್ಲಿ ಚಿತೆಯನ್ನು ಏರ್ಪಡಿಸಿ, ಅದರಲ್ಲಿ ಪತಂಗಗಳಂತ ಸುಟ್ಟುಕೊಂಡು ಪ್ರಾಣ ಕೊಡುತ್ತಿದ್ದರು.

**ಕೇಸರಿಯಾ:—**

ಇತ್ತ ವೀರಾಗ್ರಣಿಗಳೆಲ್ಲ ತಮ್ಮ ಮನೆತನದ ಮೋಹವನ್ನು ತೊರೆದು, ಕದನದ ಕಹಳೆಯಿಂದ ಪ್ರೇರಿತರಾಗಿ ಅಸಮವಾದ ಆವೇಶದಿಂದ ವೈರಿಗಳ ಮೇಲೆ ಏರಿಹೋಗುತ್ತಿದ್ದರು. ಆಗ ಪ್ರತಿಯೊಬ್ಬ ರಜಪೂತನು ಕಾಲಭೈರವನಂತೆ ಕಂಡು ವೈರಿಗಳನ್ನು ನುಚ್ಚುನೂರಾಗಿ ಕಡಿಯುತ್ತಿದ್ದನು. ಈ ಕಾಲಕ್ಕೆ ಇವರು ಕೇಸರೀ ಬಣ್ಣದ ಬಟ್ಟೆಗಳನ್ನು ತೊಡುತ್ತಿದ್ದರು. ಯುದ್ಧದ ಕೊನೆಯ ಪ್ರಯತ್ನಕ್ಕಾಗಿ ವೀರಾಂಗನೆಯರು ಜೋಹರವನ್ನೂ, ವೀರರು ಕೇಸರಿಯವನ್ನೂ ಮಾಡಿದರು.

ಯುದ್ಧದ ಭೀಕರತೆಯನ್ನು ಕಳೆಯಲಿಕ್ಕೂ, ಪೂರ್ವಜರ ಗುಣಗಳಿಂದ ಉತ್ಸಾಹಗೊಳ್ಳಲಿಕ್ಕೂ ರಜಪೂತ ಲಾವಣಿಕಾರರು ಬಹಳ ಸಹಾಯ ಮಾಡಿದರು.

ಆಗಿನ ಕಾಲಕ್ಕೆ ಇರಾಣದ ಅರಸನಾದ ಹಜ್ಜಾಜನೆಂಬವನಿಂದ ಪ್ರೇಷಿತನಾಗಿ ಮಹಮ್ಮದ ಬಿನ್ ಕಾಶೀಮನೆಂಬವನು ಕೃ. ಶ. ೭೧೨ ರಲ್ಲಿ ಸಿಂಧದ ಮೇಲೆ ದಾಳಿ ಮಾಡಿದನು ಅದನ್ನು ಕೈವಶ ಮಾಡಿಕೊಂಡು ಅಲ್ಲಿ ತನ್ನ ಪ್ರತಿನಿಧಿಯನ್ನಿಟ್ಟು ಹೋದನು. ಇವನೂ, ಇವನ ತರುವಾಯ ಬಂದ ಪ್ರತಿನಿಧಿಗಳೂ ಸಿಂಧದ ನೆರೆಯ ಪ್ರದೇಶಗಳಿಗೂ, ದಕ್ಷಿಣ ಭಾರತಕ್ಕೂ ಕಾಲು ಚಾಚಲು ಹವಣಿಸಿದರು. ಆದರೆ ಆಗ ಅಲ್ಲಲ್ಲಿ ರಾಜರೆನಿಸಿದ ರಜಪೂತ ಅರಸರು ಮಹಮ್ಮದೀಯರ ಆಟವನ್ನು ನಡೆಯಗೊಡಲಿಲ್ಲ. ಇದೇ ಕಾಲಕ್ಕೆ ಅಫಗಾಣಿಸ್ತಾನದಲ್ಲಿ ತಲೆಯೆತ್ತಿದ ಅಲಪ್ತಗೀನನೂ, ನಂತರ ಅಲ್ಲಿ ದೊರೆಯೆನಿಸಿದ ಸಬಕ್ತಗೀನನೂ ಭಾರತದಲ್ಲಿ ನುಗ್ಗಲು ಪ್ರಯತ್ನಿಸಿದರು. ಆಗ ಪಂಜಾಬದಲ್ಲಿ ಆಳುತ್ತಿದ್ದ ಜಯಪಾಲನೂ, ದಿಲ್ಲಿ, ಅಜಮೀರ, ಕನೋಜಗಳಲ್ಲಿ ಆಳುತ್ತಿದ್ದ ರಜಪೂತರೂ ಮಹಮ್ಮದೀಯರೊಡನೆ ಯುದ್ಧ ನಡಿಸಿದರು. ಆದರೆ ರಜಪೂತರಿಗೆ ದೈವಬಲವಿಲ್ಲದ್ದರಿಂದ ಈ ಕಾಳಗಗಳಲ್ಲಿ ಸೋಲನ್ನೊಪ್ಪಬೇಕಾಯಿತು. ಈ ನಂತರ ಅಫಗಾನಿಸ್ತಾನದ ಪಟ್ಟವೇರಿದ ಗಝನಿ ಮಹಮ್ಮೂದನೆಂಬವನು ಭಾರತದ ಮೇಲೆ ೧೭ ಸಾರೆ ದಾಳಿ ಮಾಡಿದನು. ಅವುಗಳಲ್ಲಿ ಕಲಿಂಜರ, ಕನೋಜ, ಠಾಣೇಶ್ವರ, ಮತ್ತು ಸೋಮನಾಥಗಳ ಮೇಲಿನ ದಾಳಿಗಳು ಅತ್ಯುಗ್ರವಾಗಿದ್ದವು. ಈ ದಾಳಿಗಳಲ್ಲಿ ಮಹಮ್ಮೂದನಿಗೆ ವಿಪುಲವಾದ ಸಂಪತ್ತು ಸಿಕ್ಕಿತು. ಮಹಮ್ಮೂದನು ಕೃ. ಶ. ೧೦೩೦ ರಲ್ಲಿ ಮರಣಹೊಂದಿದನು.

ಕೃ. ಶ ೧೧೮೬ ರಲ್ಲಿ ಅಫಗಾಣಿಸ್ತಾನದ ದೊರೆಯೆನಿಸಿದ ಘೋರಿ ಮಹಮ್ಮದನು ಭಾರತಕ್ಕೆ ನುಗ್ಗಿದಾಗ, ಇಲ್ಲಿ ಅನೇಕ ರಜಪೂತ ಮನೆತನಗಳು ರಾಜ್ಯಭಾರ ಮಾಡುತ್ತಿದ್ದವು. ದಿಲ್ಲಿಯ ಅನಂಗಪಾಲ, ಅಜಮೀರದ ಸೋಮೇಶ್ವರ, ಕನೋಜದ ಜಯಚಂದ, ಚಿತ್ತೋಡದ ಸಾಮಂತಸಿಂಗ ಮುಂತಾದ ಅನೇಕ ಅರಸರು ಖ್ಯಾತಿಗೊಂಡಿದ್ದರು. ಇವರಲ್ಲಿ ಕೆಲವರು

ಒಗ್ಗಟ್ಟಿನಿಂದ ನಡೆದರೆ, ಇನ್ನು ಕೆಲವರು ತಮಗೆ ಬೇಡಾದವರನ್ನು ಸದೆಬಡೆಯಲು ಹೊರಗಿನ ವೈರಿಗಳನ್ನು ಬರಮಾಡಿಕೊಳ್ಳುವವರಾಗಿದ್ದರು. ಕಾಲಗತಿಯಲ್ಲಿ ಪೃಥ್ವಿರಾಜ ಚವ್ಹಾಣ ಎಂಬವನು ಅಜಮೀರ, ದಿಲ್ಲಿಗಳಿಗೆ ಒಡೆಯನಾದನು. ಕ್ರಿ. ಶ ೧೧೯೧ ರಲ್ಲಿ ಪೃಥ್ವಿರಾಜನಿಗೂ, ಮಹಮ್ಮದ ಘೋರಿಗೂ ಪಾನಿಪತ್ತದ ನೆರೆಯಲ್ಲಿ ಕದನವೆಸಗಿ, ಘೋರಿಯು ಸೋಲನ್ನೊಪ್ಪಿ ಹಿಂದಿರುಗಬೇಕಾಯಿತು. ಆದರೆ ಕನೋಜದ ಜಯಚಂದನು ಪೃಥ್ವಿರಾಜನ ಮೇಲಿನ ವೈರದಿಂದ ಮುಂದೆ ಎರಡೇ ವರ್ಷಗಳಲ್ಲಿ, ಮಹಮ್ಮದನನ್ನು ಮತ್ತೊಮ್ಮೆ ಬರಮಾಡಿಕೊಂಡನು. ಈ ಸಾರೆ ಠಾಣೇಶ್ವರದ ಬಳಿ ಕದನವೆಸಗಿ ಪೃಥ್ವಿರಾಜನು ಸೋತು ಮರಣಹೊಂದಿದನು. ಮುಂದೆ ಕೆಲವೇ ದಿನಗಳಲ್ಲಿ ಜಯಚಂದನನ್ನೂ ಘೋರಿಯು ಹಣ್ಣಿಗೆ ತಂದು, ಅವನ ಪಟ್ಟಣವನ್ನು ಲೂಟಿ ಮಾಡಿದನು. ಮುಂದೆ ಇವನು ಕಾಶಿಯನ್ನೂ ಮುತ್ತಿದನು. ಬಳಿಕ ತನ್ನ ದೇಶಕ್ಕೆ ಮರಳಿದನು. ಆ ಕಾಲಕ್ಕೆ ತಾನು ಗೆದ್ದ ಭಾರತದ ಪ್ರದೇಶಗಳನ್ನು ನೋಡಿಕೊಳ್ಳಲಿಕ್ಕೆ ಕುತುಬುದ್ದೀನ ಐಬಕ ಎಂಬ ತನ್ನ ಗುಲಾಮನನ್ನು ದಿಲ್ಲಿಯಲ್ಲಿಟ್ಟು ಹೋದನು ಮುಂದೆ ೧೨೦೬ ರಲ್ಲಿ ಇವನ ಕೊಲೆಯಾಗಿದ್ದರಿಂದ, ಕುತುಬುದ್ದೀನ ಐಬಕನು ಹಿಂದುಸ್ತಾನದಲ್ಲಿ ಸ್ವತಂತ್ರನಾದನು. ಈ ರೀತಿ ದಿಲ್ಲಿ ಭಾಗದಲ್ಲಿ ಮಹಮ್ಮದೀಯರ ಆಳಿಕೆಯು ಕಾಲೂರಿತು.

ಪ್ರಶ್ನಾವಲಿ:—

(೧) ರಜಪೂತರ ಮೂಲದ ಬಗ್ಗೆ ಪಂಡಿತರಲ್ಲಿದ್ದ ವಾದಗಳಾವವು ?

(೨) ರಜಪೂತರಲ್ಲಿ ಪ್ರಚಾರದಲ್ಲಿದ್ದ ವಿಶಿಷ್ಟ ಆಚಾರಗಳಾವವು ?

(೩) ಮಹಮ್ಮದೀಯರಿಗೆ ರಜಪೂತರು ಏಕೆ ಸೋಲಬೇಕಾಯಿತು ?

---

## ೧೩. ವಿಶಾಲ ಭಾರತ

ಭಾರತವು ತನ್ನ ಸಂಸ್ಕೃತಿಯನ್ನು, ಧರ್ಮವನ್ನು, ರಾಜರಸತ್ತೆಯನ್ನು ಹೊರನಾಡುಗಳಿಗೆ ಹರಡಿ ವಿಶಾಲ ಭಾರತದ ನಿರ್ಮಾಣ ಮಾಡಿ, ಮೇಲ್ಮೆ

ಯನ್ನು ಪಡೆದಿದೆ

**ಭೌದ್ಧ ಧರ್ಮ ಪ್ರಸಾರ:—**

ಭೌಧ್ಧ ಧರ್ಮವು ಚೀನ ಜಪಾನ ದೇಶಗಳಿಗೆ ಮತ್ತು ಮಧ್ಯ ಏಶಿಯದ ದೇಶಗಳಿಗೆ ಸಾಗಿ, ಅಲ್ಲಿಯ ಜನರಿಗೆ ಭಾರತವು ಯಾತ್ರಾಸ್ಥಾನವಾಯಿತು. ಮೌರ್ಯ ಕುಲದ ಅಶೋಕನು ಬೌದ್ಧಧರ್ಮತತ್ವಗಳ ಪ್ರಸಾರಕ್ಕೆ ಹೆಚ್ಚು ಗಮನ ಕೊಟ್ಟನು. ಇವನಿಂದ ಪ್ರೇಷಿತರಾದ ಬೌದ್ಧ ಭಿಕ್ಷುಗಳು ಬಹು ದೂರ ದೇಶಗಳಿಗೆ ಹೋಗಿ ಅಲ್ಲಿ ಬೌದ್ಧ ತತ್ವಗಳನ್ನು ಹರಡಿದರು ಇವರು ಸಿರಿಯಾ, ಇಜಿಪ್ತ, ಬ್ಯಾಕ್ಟ್ರಿಯಾ, ಚೀನ, ನೇಪಾಳ, ಬ್ರಹ್ಮದೇಶ, ಶಾಂತಿ ಸಾಗರದ ನಡುಗಡ್ಡೆಗಳು, ಸಿಲೋನ—ಇವುಗಳಲ್ಲಿ ಪ್ರಸಾರ ಮಾಡಿದರು ಇದು ಇಂದಿಗೂ ಲಕ್ಷೋಪಲಕ್ಷ ಜನರ ಮತವೆನಿಸಿದೆ ಈ ಕಾರಣದಿಂದ ಬೌದ್ಧಧರ್ಮವು ಜಗತ್ತಿನ ಶ್ರೇಷ್ಠ ಧರ್ಮಗಳಲ್ಲಿ ಒಂದಾಗಿದೆ

ಕೃ. ಶ. ಎರಡನೆಯ ಶತಮಾನದಲ್ಲಿ ಪೇಶಾವರದಲ್ಲ ರಾಜ್ಯವಾಳಿದ ಕುಶಾನ ಕುಲದ ಕನಿಷ್ಕನೆಂಬ ಅರಸನು ಮಧ್ಯ ಏಶಿಯದ ವರೆಗೆ ತನ್ನ ರಾಜ್ಯ ಬೆಳೆಸಿದನು ಜೊತೆಗೆ ಮಧ್ಯ ಏಶಿಯದಲ್ಲಿ ಬೌದ್ಧ ಧರ್ಮದ ಪ್ರಸಾರವೂ ಇವನಿಂದ ನಡೆಯಿತು ಕಾಲಗತಿಯಲ್ಲಿ ತಾನೂ ಬೌದ್ಧಮತಾನುಯಾಯಿಯಾಗಿ, ೪ನೆಯ ಬೌದ್ಧ ಮಹಾಸಭೆಯನ್ನು ನೆರೆಸಿದ ಯಶಸ್ಸು ಪಡೆದನು. ಈ ಸಭೆಯ ಪರಿಣಾಮವಾಗಿ ಬೌದ್ಧರಲ್ಲಿ ಮಹಾಯಾನ ಹೀನಯಾನ ಪಂಥಗಳು ತಲೆದೋರಿದವು.

**ಶಾಂತಿ ಸಾಗರದ ಪ್ರದೇಶಗಳಲ್ಲಿ ಭಾರತೀಯರ ರಾಜಸತ್ತೆ -**

ಕೃ. ಶ. ೧ನೆಯ ಶತಮಾನದಿಂದ ೧೫ನೆಯ ಶತಮಾನದ ವರೆಗೆ ಭಾರತೀಯರು ಚೀನ, ಇಂಡೋಚೀನ, ಕಾಂಬೋಡಿಯಾ, ಸಿಯಾಮು, ಮಲಾಯಾ, ಫಿಲಿಪಾಯಿನ ನಡುಗಡ್ಡೆಗಳು, ಜಪಾನ, ಮತ್ತು ಅಮೇರಿಕೆಯ ಕೆಲವು ಪ್ರದೇಶಗಳಲ್ಲಿ ತಮ್ಮ ರಾಜಸತ್ತೆಯನ್ನು ನಡೆಸಿದಂತೆ ತೋರುತ್ತದೆ. ಮೊಟ್ಟಮೊದಲಿಗೆ ಈ ಸ್ಥಳಗಳಿಗೆ ಮುಟ್ಟಲು ಪ್ರಯತ್ನಬಟ್ಟವರೆಂದರೆ, ಭಾರತದ ವ್ಯಾಪಾರಿಗಳು. ಇವರು ಬಹುಶಃ ಭೂಮಾರ್ಗ ಜಲಮಾರ್ಗಗಳೆರಡನ್ನೂ ಉಪಯೋಗಿಸಿದರು ಕಾಲಗತಿಯಲ್ಲಿ ಭಾರತೀಯರು ಈ ಪ್ರದೇಶಗಳಲ್ಲಿ ವಸಾಹತು ಮಾಡಿದರು.

**ಚೀನ:—** ಇದು ಶಾಂತಿಸಾಗರವ ಪೂರ್ವ ದಂಡೆಗೆ ವಿಶಾಲವಾಗಿ ಹಬ್ಬಿದ ದೇಶವು. ಇದು ಭಾರತದ ತೀರ ಉತ್ತರಕ್ಕ ಇದ್ದು, ಚೀನಿಯರಲ್ಲಿ ಭಾರತದ ಪ್ರಭಾವವು ಸ್ಪಷ್ಟವಾಗಿ ಕಂಡು ಬರುವದು ಚೀನ ಭಾರತಗಳ ಸಂಪರ್ಕವು ಕೃ. ಪೂ ಕಾಲದಿಂದ ನಡೆದು ಬಂದಂತೆ ಕಾಣುವದು ರಾಮಾಯಣ, ಮಹಾಭಾರತ, ವಿಷ್ಣುಪುರಾಣ ಮನುಸ್ಮೃತಿ ಕೌಟಿಲ್ಯನ ಅರ್ಥಶಾಸ್ತ್ರಗಳಲ್ಲಿ ಚೀನ ದೇಶದ ಹೆಸರು ಉಲ್ಲೇಖವಾಗಿದೆ

ಚೀನದ ಲಾ ಉಟ್ಸೆ ಎಂಬ ತತ್ವಜ್ಞಾನಿಯು ಬರೆದ 'ತಾ ಓ' ಎಂಬ ಪುಸ್ತಕದಲ್ಲಿ ಭಾರತೀಯ ವೇದಾಂತ ತತ್ವಗಳು ಸಿಗುತ್ತವೆ. ಪ್ರಾಚೀನ ಚೀನೀಯರಲ್ಲಿ ಭಾರತೀಯ ರೀತಿ ನೀತಿಗಳೂ, ಯಜ್ಞದ ಕಲ್ಪನೆಯೂ ಕಂಡು ಬರುತ್ತವೆ* ಎಂದು ಒಬ್ಬ ಆಂಗ್ಲ ಪಂಡಿತನು ಹೇಳಿದ್ದಾನೆ

**ಇಂಡೋಚೀನ :—** ಇದು ಚೀನದ ದಕ್ಷಿಣಕ್ಕಿದೆ. ಇಂದು ಅನ್ನಾಂ ಎಂದು ಕರೆಯುವ ಇದರ ಭಾಗದಲ್ಲಿ ಪ್ರಾಚೀನ ಕಾಲಕ್ಕೆ ಚಂಪಾ ಎಂಬ ರಾಜ್ಯವಿತ್ತು. ಇದು ಈ ಪ್ರದೇಶದಲ್ಲಿ ಭಾರತೀಯರ ಪ್ರಥಮ ರಾಜ್ಯವು. ಅನ್ನಾಂದ ಪ್ರಾಚೀನ ಗ್ರಂಥವೊಂದರಲ್ಲಿ ರಾಮಾಯಣದ ವಾನರರ ಕಥೆಯು ಬರುವದಂತೆ. ಕೃ. ಶ ೨ನೆಯ ಶತಮಾನದಿಂದ ಕೃ. ಶ ೧೫ ನೆಯ ಶತಮಾನದ ವರೆಗೆ ಈ ರಾಜ್ಯವು ಭಾರತೀಯ ಸಂಸ್ಕೃತಿ ರಾಜಸತ್ತೆಗಳನ್ನು ಇಲ್ಲಿ ಮೆರೆಸಿತು. ೬ನೆಯ ಶತಮಾನದಲ್ಲಿ ಆಗಿಹೋದ ಚಂಪಾರಾಜ್ಯದ ರುದ್ರವರ್ಮನೆಂಬವನು ಬಹಳ ಪ್ರಸಿದ್ಧಿಯನ್ನು ಪಡೆದನು. ನಂತರ ಬಂದ ಪಾಂಡುರಂಗ ಭೃಗು ಮುಂತಾದವರೂ ಮಿಗಿಲಾದ ಹೆಸರು ಪಡೆದರು. ಕಾಲಗತಿಯಲ್ಲಿ ನೆರೆಯ ದೇಶಗಳ ಕೂಡ ಜಗಳ ನಡೆದು ಚಂಪಾರಾಜ್ಯವು ಕಳೆಗುಂದಿತು.

ತಮ್ಮ ಕೈ ನಡೆಯುವ ಕಾಲಕ್ಕೆ ಭಾರತೀಯರು ಇಲ್ಲಿ ತಮ್ಮ ಸಮಾಜ ರಚನೆ, ನ್ಯಾಯದಾನ, ಕಲಾಕೃತಿ, ಶಿಲ್ಪಕಲೆ, ಮುಂತಾದವುಗಳನ್ನು ಹರಡಿದರು. ಇಲ್ಲಿಯ ರಾಜಭಾಷೆಯು ಸಂಸ್ಕೃತವಾಗಿತ್ತು. ಇಲ್ಲಿಯ ಜನರಲ್ಲಿ ಶಿವಪೂಜೆಯೆ ಹೆಚ್ಚಾಗಿದ್ದರೂ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳ ಆರಾ

---

* ಡಾ. ಕ್ರೀಲ ಇವರ “ದಿ ಬರ್ಥ ಆಫ್ ಚಾಯಿನಾ” ಎಂಬ ಗ್ರಂಥದಲ್ಲಿ.

ಧನೆಯೂ ನಡೆಯಿತು. ಇಲ್ಲಿಯ ಶಿಲ್ಪ ಕಲೆಯು ಬಾದಾಮಿ, ಕಂಚಿ, ಮಾಮಲ್ಲಪುರಂಗಳ ಶಿಲ್ಪಕಲೆಯನ್ನು ಹೋಲುತ್ತದೆ. ಇಲ್ಲಿ ಬಹಳ ಮಂದಿ ಹಿಂದೂ ಅರಸರು ಆಳಿದರೆಂದು ಪಂಡಿತರು ನಂಬುತ್ತಾರೆ.

**ಕಂಬುಜ (ಕಾಂಬೋಡಿಯಾ) :—** ಹಿಂದಕ್ಕೆ ಇಲ್ಲಿ 'ಫೂನಾನ' ಎಂಬ ರಾಜ್ಯವಿದ್ದಿತು. ಕೌಂಡಿಣ್ಯನೆಂಬ ಬ್ರಾಹ್ಮಣನೊ, ಇಂದ್ರಪ್ರಸ್ಥದ ರಾಜಪುತ್ರನೋ ಈ ರಾಜವಂಶದ ಮೂಲವೆಂದು ಹೇಳುತ್ತಾರೆ. ಕಂಬು ಋಷಿಯ ವಂಶಜರಾದ್ದರಿಂದ ಅವರಿಗೆ 'ಕಂಬುಜ' ಎಂಬ ಹೆಸರು ಬಂದಿತೆಂದೂ ಹೇಳುವದುಂಟು. ಈ ರಾಜ್ಯವು ಕ್ರಿ. ಶ. ೨ನೆಯ ಶತಕದಿಂದ ೧೪ನೆಯ ಶತಕದ ತನಕ ಬಾಳಿತು. ಅರಸರು ಶಿವಪೂಜಕರಾಗಿದ್ದರೂ, ಸಾಮಾನ್ಯ ಜನರು 'ಹರಿ ಹರ' ದೇವತೆಯನ್ನು ಪೂಜಿಸಿದರು. ಇಂದ್ರವರ್ಮನೆಂಬ ರಾಜನ ಕಾಲಕ್ಕೆ ಈ ರಾಜ್ಯವು ಸಾಮ್ರಾಜ್ಯವೆನಿಸಿತು. ಇಲ್ಲಿಯ ಅಂಗೋರ ಎಂಬ ನಗರದಲ್ಲಿ ಒಂದು ಸುಂದರವಾದ ಮಂದಿರವಿದ್ದು, ಅದು ಮೊದಲು ವಿಷ್ಣುವಿನ ಗುಡಿಯಿರಬಹುದೆಂಬ ಅನುಮಾನ ಬರುತ್ತದೆ. ಈಗ ಇದು ಬೌದ್ಧ ಮಂದಿರವಾಗಿದೆ. ರಾಮಾಯಣ ಮಹಾಭಾರತಗಳು ಇಲ್ಲಿ ಪ್ರಚಲಿತವಿದ್ದಂತೆ ಕಾಣುತ್ತದೆ.

**ಸಿಯಾಮ (ಶ್ಯಾಮ) :—** ಇಲ್ಲಿ ವೈದಿಕ ಮತ್ತು ಹೀನಯಾನ ಬೌದ್ಧಮತಗಳೆರಡೂ ನಡೆಯುತ್ತಿದ್ದಂತೆ ಕಾಣುತ್ತದೆ. ಇಂದಿಗೂ ಇಲ್ಲಿಯ ಜನರ ಮುಖ್ಯ ಧರ್ಮವು ಬೌದ್ಧಧರ್ಮವಾಗಿದೆ. ಹೀಗಾಗಿ, ಇಲ್ಲಿಯ ಜನರ ರೀತಿನೀತಿಗಳಲ್ಲಿ ವೈದಿಕ ಧರ್ಮದ ಪ್ರಭಾವವು ಕಂಡುಬರುತ್ತದೆ. ಇಲ್ಲಿಯ ಒಂದು ಮಂದಿರದಲ್ಲಿ ವಿಷ್ಣು, ಲಕ್ಷ್ಮಿ, ಮತ್ತು ಕೆಲವು ಮೂರ್ತಿಗಳಿವೆ. ೧೨-೧೩ ವರ್ಷದ ಬಾಲಕರಿಗೆ ಇಲ್ಲಿಯ ಜನರು ಮಾಡುವ ಒಂದು ಸಂಸ್ಕಾರವು ಹಿಂದುಗಳ ಉಪನಯನವನ್ನು ಹೋಲುತ್ತದೆ.

**ಬಲಿದ್ವೀಪ :—** ಇದಾದರೂ ಹಿಂದುಗಳ ಸಂಸ್ಕೃತಿ ರಾಜಸತ್ತೆಗಳಿಗೆ ಒಳಪಟ್ಟಿದ್ದಿತು. ಇಲ್ಲಿಯ ನರ್ತನ ಕಲೆ, ರಾಮಾಯಣ ಮಹಾಭಾರತಗಳಲ್ಲಿಯ ಜನರ ನಂಬಿಕೆಗಳು ಭಾರತದ ವರ್ಚಸ್ಸನ್ನು ಎತ್ತಿತೋರಿಸುವವು.

**ಮಾಲಿಯ ದ್ವೀಪ :—** ಶಾಂತಿ ಸಾಗರದಲ್ಲಿ ಇದು ತೀರ ದಕ್ಷಿಣಕ್ಕಿದೆ.

ಇಲ್ಲಿ ಹಿಂದುಗಳು ಕ್ರಿ ಶ ೨ ನೆಯ ಶತಕದಿಂದ ಇದ್ದದ್ದು ಕಂಡು ಬರುತ್ತದೆ. ೬ ನೆಯ ಶತಕದಲ್ಲಿ ಸಂಸ್ಕೃತವು ರಾಜಭಾಷೆಯಾಗಿದ್ದಂತೆ ಕಾಣುವದು ಇಲ್ಲಿಯ ಒಂದು ಗುಡ್ಡದ ಮೇಲೆ ದುರ್ಗೆ, ಗಣೇಶ, ನಂದಿಗಳ ಮೂರ್ತಿಗಳು ಸಿಕ್ಕಿವೆ. ಮತ್ತಿತರ ಕಾರಣಗಳಿಂದ ಇಲ್ಲಿಯ ಪ್ರಾಚೀನ ನಿವಾಸಿಗಳು ಹಿಂದುಗಳೇ ಆಗಿದ್ದರೆಂದು ನಂಬಲಾಗಿದೆ

**ಮಲಕ್ಕಾ ದ್ವೀಪಗಳು** — ಇಲ್ಲಿಯ ಅವಶೇಷಗಳ ಪರೀಕ್ಷೆಯಿಂದ, ಇಲ್ಲಿ ಒಂದು ಕಾಲಕ್ಕೆ ದೇವನಾಗರಿ ಲಿಪಿಯು ಪ್ರಚಾರದಲ್ಲಿದ್ದಂತೆ ಕಂಡು ಬರುವದು ಪೋರ್ತಗೀಜ ಅಲ್ಬುಕರ್ಕನು ಹೇಳುವದೇನೆಂದರೆ, ಇಲ್ಲಿಯ ಅರಸು 'ಪರಮಾಸುರಿ' (ಪರಮೇಶ್ವರ)ಯು ಜಾವಾದ ರಾಜಕನ್ಯೆಯನ್ನು ಮದುವೆಯಾದನು 'ಮಲಕ್ಕಾ' ಎಂಬುದು ಅವನೇ ಇಟ್ಟ ಹೆಸರು.

**ಸುಮಾತ್ರಾ (ಸ್ವರ್ಣಭೂಮಿ)** — ಕ್ರಿ ಶ. ೭ ನೆಯ ಶತಕದಲ್ಲಿ ಇಲ್ಲಿ ಶ್ರೀ ವಿಜಯವೆಂಬ ರಾಜ್ಯವಿದ್ದಿತು. ಬರಬರುತ್ತ ಇದು ವಿಶಾಲವಾಗಿ ಬೆಳೆದು ಜಾವಾ, ಮಲಯಾ, ಮತ್ತು ಶ್ಯಾಮ ನಡುಗಡ್ಡೆಗಳನ್ನು ವಶನಡಿಸಿಕೊಂಡಿತು ಇದು ಹಿಂದುಗಳ ರಾಜ್ಯವಾಗಿದ್ದು ೧೪ ನೆಯ ಶತಮಾನದಲ್ಲಿ ಇದು ಕೊನೆಗೊಂಡಿತು ಇಲ್ಲಿಯ ರಾಜರು ಹೀನಯಾನ ಬೌದ್ಧರಿದ್ದರೆಂದು ತಿಳಿಯುತ್ತದೆ.

**ಫಿಲಿಫಾಯಿನ್ ನಡುಗಡ್ಡೆಗಳು** — ಈ ಪ್ರದೇಶದಲ್ಲಿಯ ಭಾಷೆಯಲ್ಲಿಯ ಕೆಲವು ಶಬ್ದಗಳು ಸಂಸ್ಕೃತ ಶಬ್ದಗಳನ್ನು ಹೋಲುತ್ತವೆ. ಕ್ರಿ. ಶ ೧ ನೆಯ ಶತಮಾನದಿಂದ ಇಲ್ಲಿ ಹಿಂದುಗಳ ಪ್ರವೇಶವಿರಬಹುದೆಂದು ಬಲ್ಲವರು ತರ್ಕಿಸುತ್ತಾರ. ಇಲ್ಲಿಯ ರಾಜಸಭೆಯಲ್ಲಿ ಮನುವನ್ನು ಹೋಲುವಂಥ ಒಂದು ಚಿತ್ರವಿದೆಯಂತೆ.

**ಅಮೇರಿಕಾ** ಇಲ್ಲಿಯ " ಕೆಂಪು ಭಾರತೀ "ಯರಲ್ಲಿ ಕಂಡು ಬರುವ ಕೆಲವು ರೀತಿ ನೀತಿಗಳು ಭಾರತದೇಶದವೆಂದು ಹೇಳಲಾಗುತ್ತದೆ. ಸ್ತ್ರೀಯರು ಸತಿ ಹೋಗುತ್ತಿದ್ದರಂತೆ. ಸೂರ್ಯಪೂಜೆ ನಡೆಯಿತಂತೆ.

ದಕ್ಷಿಣ ಭಾರತದಲ್ಲಿ ಅನಾದಿ ಕಾಲದಿಂದ ನಡೆದು ಬಂದ ಚೋಳ ರಾಜರ ಮನೆತನದಲ್ಲಿ ಕ್ರಿ. ಶ. ೧೦ ಮತ್ತು ೧೧ ನೆಯ ಶತಕಗಳಲ್ಲಿ ರಾಜ

ರಾಜ ಚೋಳ ಮತ್ತು ರಾಜೇಂದ್ರಚೋಳರೆಂಬ ಪ್ರಸಿದ್ಧ ಅರಸರು ಆಗಿಹೋದರು. ರಾಜೇಂದ್ರ ಚೋಳನಿಗೆ ಗಂಗಾಯಿಕೊಂಡಚೋಳನೆಂಬ ಬಿರುದು ಸಲ್ಲಿತು. ಯಾಕಂದರೆ ತನ್ನ ರಾಜ್ಯವನ್ನು ಗಂಗಾ ನದಿಯ ವರೆಗೆ ಬೆಳಸಿದನು. ಅವನು ತನ್ನ ಬಲಿಷ್ಠವಾದ ಹಡಗುಪಡೆಯ ಸಹಾಯದಿಂದ ಸುವರ್ಣ ಭೂಮಿಯಲ್ಲಿಯ ಶ್ರೀ ವಿಜಯವೆಂಬ ರಾಜ್ಯವನ್ನು ಗೆದ್ದನು. ಮತ್ತು ಕಂಚಿಯಿಂದ ಈ ರಾಜ್ಯಗಳನ್ನೆಲ್ಲ ಆಳಿದನೆಂದು ಹೇಳಲಾಗುತ್ತದೆ.

**ಪ್ರಶ್ನಾವಲಿ:—**

(೧) ಸಂಸ್ಕೃತಿಯ ಪ್ರಸಾರವೆಂದರೇನು ? ಭಾರತೀಯರು ತಮ್ಮ ಸಂಸ್ಕೃತಿಯನ್ನು ಯಾವ ದೇಶಗಳಿಗೆ, ಹೇಗೆ ಹಬ್ಬಿಸಿದರು ?

(೨) ಜಗತ್ತಿನ ಬಾಹ್ಯರೇಷೆಯ ನಕ್ಷೆಯಲ್ಲಿ ಶಾಂತಿ ಸಾಗರದ ಪ್ರದೇಶಗಳನ್ನು ಗುರುತಿಸಿ ಚಿತ್ರಿಸಿರಿ.

(೩) ಶಾಂತಿಸಾಗರದಲ್ಲಿ ಭಾರತೀಯ ರಾಜ್ಯಗಳಾವವು ? ಬರೆಯಿರಿ.

---

## ೧೪. ಮಧ್ಯ ಕಾಲದ ಭಾರತ.

ಘೋರಿ ಮಹಮ್ಮದನು ಮರಳಿ ಹೋಗುವಾಗ ಕುತುಬುದ್ದೀನ ಐಬಕ ಎಂಬ ಗುಲಾಮನನ್ನು ದಿಲ್ಲಿಯಲ್ಲಿ ಇಟ್ಟು ಹೋದನಷ್ಟೆ ! ಇವನ ವಂಶದವರು ರಾಜ್ಯವಾಳುತ್ತಿರಲು ಮಹಮ್ಮದೀಯ ಸತ್ತೆಯು ನೆರೆಹೊರೆಯ ರಾಜ್ಯಗಳಲ್ಲಿ ಬೇರೂರಹತ್ತಿತು. ಈ ವಂಶದ ನಂತರ ಖಿಲಜಿ ಮನೆತನದ ಆಳಿಕೆಯು ಪ್ರಾರಂಭವಾಯಿತು. ಈ ಮನೆತನದಲ್ಲಿ ಅಲ್ಲಾ-ಉ-ದ್ದೀನ ಖಿಲಜಿ ಎಂಬವನು ಒಳ್ಳೆ ಸಾಹಸಿ ಮತ್ತು ತಂತ್ರಗಾರನಾದ ಅರಸನಾದನು. ಇವನ ಕಾಲಕ್ಕೆ ಚಿತೋಡದ ಅರಸನಿಗೆ ಇವನಿಂದ ಹಾನಿತಟ್ಟಲು, ಅಲ್ಲಿಯ ರಾಣಿಯರ ಮತ್ತು ಸಾಮಾನ್ಯ ಸ್ತ್ರೀಯರ ಜೋಹರದ ಕರುಣಕಥೆಯು ನಡೆಯಿತು. ಅಲ್ಲಾವುದ್ದೀನನ ಸೇನಾನಿಯೊಬ್ಬ ಮಲಿಕ ಕಾಫುರ ಎಂಬವನು ದಕ್ಷಿಣಕ್ಕೆ ದಂಡಯಾತ್ರೆಗೈದು ದೇವಗಿರಿ ದ್ವಾರಸಮುದ್ರಗಳ ಅರಸರನ್ನು ಹಣಿದು

ರಾಮೇಶ್ವರದ ವರೆಗೆ ಸಾಗಿ ಹೋದನು ಇದೇ ಕಾಲಕ್ಕೆ ಬಖತ್ಯಾರ ಖಿಲಜಿ ಎಂಬ ಸರದಾರನು ಬಂಗಾಲದ ವರೆಗೆ ನುಗ್ಗಿದನು.

ಈ ಮನೆತನದ ನಂತರ ತಘಲಖ, ಸಯ್ಯದ, ಲೋದಿ ಮನೆತನಗಳು ದಿಲ್ಲಿಯ ಪಟ್ಟದ ಮೇಲೆ ಮೂಡಿ ಮಾಯವಾದವು. ತಘಲಖ ಮನೆತನದ ಮಹಮ್ಮದನೆಂಬ ಅರಸನು ತಲೆತಿರುಕನೆಂದೂ, "ಸೃಷ್ಟಿಯ ವಿಚಿತ್ರ ಪ್ರಾಣಿ" ಯೆಂದೂ ಹೆಸರಾದನು. ಲೋದಿ ಮನೆತನದ ಕಡೆಯ ಅರಸನಾದ ಇಬ್ರಾಹಿಮ ಲೋದಿಯ ಕಾಲದಲ್ಲಿ ಮೊಗಲ ಮನೆತನದ ಬಾಬರನೆಂಬ ಅರಸನು ಹಿಂದುಸ್ತಾನಕ್ಕೆ ದಂಡೆತ್ತಿ ಬಂದನು ಕೃ. ಶ. ೧೫೨೬ ರಲ್ಲಿ ಪಾನಿ ಪತ್ತದ ಹತ್ತರ ಇವರೀರ್ವರಿಗೂ ಯುದ್ಧವೆಸಗಲು ಆದರಲ್ಲಿ ಬಾಬರನು ಗೆದ್ದು ದಿಲ್ಲಿಯ ಪಟ್ಟವನ್ನು ಆಕ್ರಮಿಸಿದನು ಅಂದಿನಿಂದ ಮೊಗಲರಾಜ್ಯವು ಪ್ರಾರಂಭವಾಯಿತು ಇಷ್ಟೊತ್ತಿಗೆ ಉತ್ತರಭಾರತದ ಬಹುಭಾಗವು ಮಹಮ್ಮದೀಯರ ಆಳಿಕೆಗೆ ಒಳಪಟ್ಟಿತ್ತು

ಮಹಮ್ಮದ ತಘಲಖನ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಬಂಡಾಯ ಗಳಾದವು. ಅವುಗಳೊಳಗೆ ೧೩೪೭ ರಲ್ಲಿ ನಡೆದ ಬಂಡನ್ನು ಅಡಗಿಸಲು ಜಾಫರಖಾನನೆಂಬೋರ್ವ ಸರದಾರನನ್ನು ಇವನು ದಕ್ಷಿಣಕ್ಕೆ ಕಳುಹಿದನು. ಜಾಫರಖಾನನು ದಕ್ಷಿಣಕ್ಕೆ ಬಂದು ತಾನು ಸ್ವತಂತ್ರನೆಂದು ಸಾರಿ ಗುಲಬುರ್ಗೆ ಯೆಂಬಲ್ಲಿ ಹೊಸದೊಂದು ರಾಜ್ಯವನ್ನೆ ಸ್ಥಾಪನೆಮಾಡಿದನು. ಇದರ ಹೆಸರು ಬಹಮನಿರಾಜ್ಯ. ಒಬ್ಬ ಬ್ರಾಹ್ಮಣನ ಉಪಕಾರ ಸ್ಮರಣೆಗೆಂದು ಬಹಮನಿ ರಾಜ್ಯವೆಂದು ಹೆಸರು ಇಡಲಾಯಿತು. ಸ್ಥಾಪಕನಾದ ಹಸನ ಗಂಗೂ ಇವನು ಕೃ. ಶ ೧೩೫೮ ರಲ್ಲಿ ಮರಣ ಹೊಂದಲಾಗಿ ಹಲಕೆಲವು ಮೇಲಾದ ರಾಜರು ಇಲ್ಲಿ ರಾಜ್ಯಭಾರ ನಡಿಸಿದರು. ಹಿಂದುಗಳು ಈ ರಾಜ್ಯಕ್ಕೆ ತಮ್ಮ ಸಹಾಯವನ್ನು ಸಲ್ಲಿಸಿದರಲ್ಲದೆ, ರಾಜ್ಯದಲ್ಲಿಯ ಮಿಗಿಲಾದ ಅಧಿಕಾರಗಳು ಹಿಂದುಗಳಿಗೇ ಸಲ್ಲಿದವು ಕೃ. ಶ. ೧೫೨೬ ರಲ್ಲಿ ಈ ರಾಜ್ಯವು ಒಡೆದು ಐದು ಭಾಗಗಳಾದವು. ವರ್‍ಹಾಡದ ಇಮಾನಶಾಹಿ, ಗೋವಳಕೊಂಡದ ಕುತುಬಶಾಹಿ, ಬೀದರದ ಬರೀದಶಾಹಿ, ಅಹಮ್ಮದನಗರದ ನಿಜಾಮಶಾಹಿ, ವಿಜಾಪುರದ ಆದಿಲಶಾಹಿಗಳೆಂಬ ಹೆಸರಿನಿಂದ ಈ ಭಾಗಗಳು ನಂತರ ಬಹು

ದಿವಸ ರಾಜ್ಯ ನಡಿಸಿದವು ಈ ಕಾಲಕ್ಕೆ ದಿಲ್ಲಿಯಲ್ಲಿ ಮೊಗಲ ಅರಸರ ರಾಜ್ಯವು ಪ್ರಾರಂಭವಾಗಿತ್ತು

ದಿಲ್ಲಿಯ ಖಿಲಜಿ ಮನೆತನದ ಅಲ್ಲಾ-ಉ-ದ್ದೀನನೆಂಬ ಅರಸನ ಸೇನಾನಿ ಮಲಿಕ ಕಾಫಿರನೆಂಬವನು ದಕ್ಷಿಣ ತುದಿಯವರೆಗೆ ದೌಡು ಮಾಡಿದನಷ್ಟೆ! ತನ್ನ ಹಾದಿಯಲ್ಲಿ ಇದ್ದ ಒರಂಗಲ್ಲ ಎಂಬ ಪಟ್ಟಣವನ್ನೂ ಇವನು ಹಾಳು ಮಾಡಿದನು ಈ ಕಾರಣದಿಂದ ಒರಂಗಲ್ಲಿನ ಕೋಶದ ಮೇಲಾಧಿಕಾರಿಗಳಾಗ ಹುಕ್ಕ ಬುಕ್ಕರೆಂಬ ಬಂಧುಗಳು ಈಗಿನ ಹಂಪಿಯ ಹತ್ತಿರ, ಶ್ರೀ ಮಾಧವಾಚಾರ್ಯ ಅಥವಾ ವಿದ್ಯಾರಣ್ಯರೆಂಬ ಬ್ರಾಹ್ಮಣರಿಂದ ಪ್ರೇರಿತರಾಗಿ



ರಾಜವೈಭವದಿಂದ ಓಲಗಕ್ಕೆ ಹೊರಟ ಶ್ರೀ ವಿದ್ಯಾರಣ್ಯ ಸ್ವಾಮಿಗಳು.

ಹೊಸದೊಂದು ಹಿಂದೂ ರಾಜ್ಯವನ್ನು ಸ್ಥಾಪಿಸಿದರು. (ಕ್ರಿ. ಶ. ೧೩೩೬) ಇದಕ್ಕೆ ವಿಜಯನಗರವೆಂಬ ಹೆಸರು ಬಂದಿತು. ಈ ಪಟ್ಟದ ಮೇಲೆ ತುಳು, ಸಾಳ್ವ, ಅರವೀಡು ಮನೆತನಗಳು ೧೫೬೫ರ ವರೆಗೆ ಬಹು ವೈಭವದಿಂದ ರಾಜ್ಯ ನಡಿಸಿದವು. ಈ ಅರಸರು ಸಾಹಿತ್ಯ, ಶಿಲ್ಪ, ಮತ್ತು ಹಿಂದೂ ಸಂಸ್ಕೃತಿಯ

ಬೆಳವಣಿಗೆಗೆ ಬಲವಾದ ಸಹಾಯಸಲ್ಲಿಸಿದರು ಇಲ್ಲಿ ಆಳಿದ ಅರಸರಲ್ಲಿ ೨ ನೆಯ ಕೃಷ್ಣ ದೇವರಾಯನೆಂಬ ಅರಸನು ಬಹಳ ಪ್ರಖ್ಯಾತಿಯನ್ನು ಪಡೆದನು. (ಕೃ ಶ ೧೫೦೯—೧೫೩೨) ಇವನು ವಿಜಾಪುರದ ಅರಸನ ಕೂಡ ರಾಯಚೂರ ಬಳಿಯಲ್ಲಿ ಕದನ ನಡಿಸಿ ಮಿಗಿಲಾದ ಯಶಸ್ಸನ್ನು ಪಡೆದನು ವಿಜಯ ನಗರದ ಕಾಲದಲ್ಲಿ ಹಲವಾರು ಪರದೇಶಿ ಪ್ರವಾಸಿಗಳು ಇಲ್ಲಿಗೆ ಬಂದು ಇದರ ವೈಭವವನ್ನು ಕಣ್ಣಾರೆ ಕಂಡು ಅಚ್ಚರಿಗೊಂಡರು. ಪೀಜ, ಮುನಿಝು, ಅಬ್ದುರ್‌ರಜಾಖ ಎಂಬವರು ತಾವು ಕಂಡ ವಿಜಯನಗರದ ವರ್ಣನೆಯನ್ನು ಬರೆದಿಟ್ಟಿರುವರು. ದಕ್ಷಿಣ ಭಾರತದಲ್ಲಿ, ಈ ರೀತಿ ಹಿಂದೂ ಮಹಮ್ಮದೀಯ ರಾಜ್ಯಗಳು ಜೊತೆಜೊತೆಗೆ ಸಾಗಿರಲು ಹಿಂದೂ-ಮಹಮ್ಮದೀಯರ ದಿನದಿನದ ಬಳಿಕೆಗಳು ಅನ್ಯೋನ್ಯರಲ್ಲಿ ತಿಳುವಳಿಕೆಯನ್ನುಂಟುಮಾಡಿದವು. ಹಿಂದೂ ರಾಜ್ಯದಲ್ಲಿ ಇಸ್ಲಾಂಮತದವರಿಗೂ, ಬಹಮನಿ ರಾಜ್ಯದಲ್ಲಿ ಹಿಂದುಗಳಿಗೂ ಮನ್ನಣೆಗಳು ಸಲ್ಲಿದವು

**ಭಾಗವತ ಧರ್ಮದ ಏಳ್ಗೆ** — ಕೃ ಶ ೮ ನೆಯ ಶತಮಾನದಿಂದ ೧೫ ನೆಯ ಶತಮಾನದವರೆಗೆ ಭಾರತ ದೇಶದೊಳಗೆ ಧಾರ್ಮಿಕ ಮತ್ತು ಸಾಮಾಜಿಕ ಪುನರುದ್ಧಾರಗಳಾದವು. ಶ್ರೀ ಶಂಕರಾಚಾರ್ಯರು ಮುಣುಗುತ್ತಿರುವ ವೈದಿಕ ಧರ್ಮವನ್ನು ಎತ್ತಿಹಿಡಿದರು. ಈ ನಂತರ ಬಂದ ಮಹಾರಾಷ್ಟ್ರ, ಕರ್ನಾಟಕ, ಗುಜರಾಥ, ಮತ್ತು ಉತ್ತರ ಹಿಂದುಸ್ಥಾನದೊಳಗಿನ ಸಂತ ಮತ್ತು ದಾಸ ಜನರು ಮುಕ್ತಿಯ ಸಾಧನೆಯನ್ನು ಭೋಧಿಸಿದರು. ಈ ಕಾರಣದಿಂದ ಭಾಗವತ ಅಥವಾ ಭಕ್ತಿ ಪಂಥವು ತಲೆಯೆತ್ತಿತು. ದಾಸ ಜನರು ದೇಶ ಭಾಷೆಗಳಲ್ಲಿ ಭೋಧಿಸಿದ್ದರಿಂದ, ಮತ್ತು ಇವರಿಂದ ಹೊರಹೊಮ್ಮಿದ ಭಾಷೆಯು ಸುಲಲಿತವೂ ಸುಮಧುರವೂ ಇದ್ದುದರಿಂದ ಪರಂಪರಾಗತ ಭಾಷಾಶೈಲಿಗಿಂತ ಈಗಿನ ಭಾಷೆಯು ತಿದ್ದುಪಾಟಹೊಂದಿತು. ಇದೇ ಕಾಲಾವಧಿಯಲ್ಲಿ ಆಗಿಹೋದ ರಾಮಾನುಜಾಚಾರ್ಯ ಮಧ್ವಾಚಾರ್ಯ, ಬಸವೇಶ್ವರ ಮುಂತಾದವರು ಭಕ್ತಿ ಪಂಥವನ್ನು ಮುಂದುವರಿಸಿದರಲ್ಲದೆ, ಮೊದಲಿನವರಿಬ್ಬರು ಪ್ರಸ್ಥಾನ ತ್ರಯಿಗಳಿಗೆ ಭಾಷ್ಯವನ್ನು ಬರೆದರು. ಇದೇ ಕಾಲದಲ್ಲಿ ಉತ್ತರದಲ್ಲಿ ರಮಾನಂದ ಮತ್ತು ಕಬೀರ ಮುಂತಾದ ಸಾಧುಗಳು ಹಿಂದು

ಮುಸ್ಲಿಂರ ವೈರಭಾವವನ್ನು ಅಲ್ಲಗಳೆಯಲು ಪ್ರಯತ್ನಿಸಿದರು. ಕಬೀರನು ರಮಾನಂದನ ಶಿಷ್ಯನಾಗಿದ್ದನು ಇವನು ದೇವರು ಒಬ್ಬನೇ ಎಂದು ಪ್ರತಿಪಾದಿಸಿ, ರಾಮ-ರಹೀಮರಲ್ಲಿ ಭೇದವಿಲ್ಲೆಂದು ಬೋಧಿಸಿದನು ಪಂಜಾಬದಲ್ಲಿಯ ಗುರು ನಾನಕನಾದರೂ ಹಿಂದು ಇಸ್ಲಾಮಿಗಳನ್ನು ಒಂದುಗೂಡಿಸಲು ಹೆಣಗಿ, ಪ್ರತ್ಯೇಕವಾದ ಮತವನ್ನೇ ಸ್ಥಾಪಿಸಿದನು ಇದುವೆ ಪಂಜಾಬದಲ್ಲಿ ನೆಲೆಸಿದ ಶೀಖ ಧರ್ಮ ಬಂಗಾಲದಲ್ಲಿ ಚೈತನ್ಯನೆಂಬ ಮಹಾವ್ಯಕ್ತಿಯು ಜನ್ಮವೆತ್ತಿ ಇಡೀ ಪ್ರಾಂತದಲ್ಲಿ ಭಕ್ತಿಮಾರ್ಗವನ್ನು ಉಪದೇಶಿಸಿದನು.

ಕರ್ನಾಟಕದಲ್ಲಿ ಇದೇ ಕಾಲಕ್ಕೆ ಪುರಂದರದಾಸ ಕನಕದಾಸರೆಂಬ ಭಕ್ತಶ್ರೇಷ್ಠರು ತಲೆಯೆತ್ತಿ ಸಾಮಾನ್ಯ ಜನರಿಗೆ ಭಕ್ತಿಮಾರ್ಗವನ್ನು ಬೋಧಿಸಿದರು. ವಿಜಯನಗರದ ಘನತೆಯ ಕಾಲಕ್ಕೆ ಪುರಂದರದಾಸರು ರಾಜಧಾನಿಯಲ್ಲಿಯೆ ನೆಲೆಸಿದರು. ಮತ್ತು ಓಣಿಓಣಿ ನಗರಸಂಕೀರ್ತನೆ ನಡಿಸಿ ಜನರಿಗೆ ಘನವಾದ ತತ್ವಗಳನ್ನು ಸರಳ ಮತ್ತು ಸುಲಭ ಭಾಷೆಯಲ್ಲ ಬೋಧಿಸಿದರು ಇಂದಿಗೂ ಪುರಂದರ ದಾಸರ ಪದಗಳು ಜನರ ಒಳಿಕೆಯಲ್ಲಿವೆ. ವೈಷ್ಣವ ಪಂಥದ ವ್ಯಾಸರಾಯರೆಂಬ ಯತಿಗಳು ವಿಜಯನಗರದ ಅಧಿಪತಿಗಳಿಗೆ ಗುರುವೆನಿಸಿದರು. ಲಿಂಗವಂತ ಯತಿಗಳೆನಿಸಿದ ನಿಜಗುಣ ಶಿವಯೋಗಿಗಳು ಇದೇ ಕಾಲಕ್ಕೆ ವಿಜಯನಗರದಲ್ಲಿದ್ದು ತತ್ವಬೋಧೆ ನಡಿಸಿದರು. ಮಹಾರಾಷ್ಟ್ರದ ಜ್ಞಾನೇಶ್ವರ ಮತ್ತು ನಾಮದೇವ ಎಂಬ ಭಕ್ತರಾದರೂ ಇದೇ ಕಾಲದವರೇ. ಇವರ ನಂತರ ಬಂದ ರಾಮದಾಸ ಮತ್ತು ತುಕಾರಾಮ ಎಂಬವರು ಮಹಾರಾಷ್ಟ್ರದೇಶದಲ್ಲಿ ತಮ್ಮ ತಮ್ಮ ಪರಂಪರೆಗಳನ್ನು ಒಡಮೂಡಿಸಿದರು.

ಈ ಭಕ್ತವರ್ಗದವರು ಮಾಡಿದ ಮೇಲ್ಮೆಯ ಕೆಲಸವೆಂದರೆ, ಸಾಮಾನ್ಯ ಜನರಿಗೆ ಸುಲಭ ಮಾರ್ಗದಿಂದ ಮೋಕ್ಷಪ್ರಾಪ್ತಿಯನ್ನು ತೋರಿಸಿಕೊಟ್ಟದ್ದಲ್ಲದೆ ದೇಶಭಾಷೆಗಳ ವಾಙ್ಮಯವನ್ನೂ ಬೆಳೆಸಿದ್ದು. ಇವರ ಎಷ್ಟೋ ಹೇಳಿಕೆಗಳು ಗಾದೆಯ ಮಾತಿನಂತೆ ಜನರ ಬಳಿಕೆಯಲ್ಲಿ ಬಂದಿವೆ-

ಮುಹಮ್ಮದೀಯರಲ್ಲಿ ಮೊದಲಿನಿಂದಲೂ ನಡೆದು ಬಂದ ಸುಫಿ ಪಂಥವು ಇದೇ ಕಾಲಕ್ಕೆ ಉತ್ತರ ಭಾರತದಲ್ಲಿ ತನ್ನ ಬೋಧೆಯನ್ನು ನಡಿಸಿತು.

ಪರ್ಶಿಯಾದಲ್ಲಿ ಮೂಲವಾಗಿ ನೆಲೆಸಿದ ಆರ್ಯಕುಲದವರು, ವೈದಿಕ ಧರ್ಮ ಪದ್ಧತಿಗಳಂತೆ ನಡೆಯುತ್ತಿರಲು, ಅವರಿಗೆ ಮಹಮ್ಮದೀಯ ಸಂಪರ್ಕವು ತಗಲಿತು. ಈ ಕಾರಣದಿಂದ ಮಹಮ್ಮದೀಯ ಮತವನ್ನು ಇವರು ಅಪ್ಪಿಕೊಂಡರೂ, ಅದರ ತತ್ವಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳದಾದರು. ಇವರಲ್ಲಿ ಹರಯೋಗದ ತತ್ವಗಳು ಹರಡಿದ್ದು, ಅದರನ್ವಯ ಹಿಂದೂ ಮತತತ್ವಗಳನ್ನು ಇವರು ಎತ್ತಿಹಿಡಿದರು. ಇಂಥವರಲ್ಲಿ ಖ್ವಾಜಾ ಮಹಮ್ಮದ ಕಿಸ್ತಿ ಎಂಬ ಓರ್ವ ಅನುಭಾವಿಕನು ಅಜಮೀರದ ಹತ್ತಿರ ಸಮಾಧಿಸ್ಥನಾಗಿದ್ದಾನೆ. ಇವರೇ ಸುಫಿ ಪಂಥದವರು.

ಈ ಕಾಲದಲ್ಲಿ ಉರ್ದು ಭಾಷೆಯು ತಲೆಯೆತ್ತಿತು ಇದು ಮೊದಲು ದಂಡಿನವರ ಭಾಷೆ ಮಾತ್ರ ಆಗಿದ್ದು, ಬರಬರುತ್ತ ತಿಳಿಯಾಗಿ, ಜನರ ನುಡಿಯಾಯಿತು ಇಂದು ಇದು ಭಾರತದ ಮುಖ್ಯ ಭಾಷೆಗಳಲ್ಲಿ ಒಂದಾಗಿದೆ.

**ಪ್ರಶ್ನಾವಲಿ:—**

(೧) ಮಹಮ್ಮದೀಯರ ರಾಜ್ಯವಿಸ್ತಾರವನ್ನು ನಕ್ಷೆಯಲ್ಲಿ ಚಿತ್ರಿಸಿರಿ.
(೨) ವಿಜಯನಗರ ರಾಜ್ಯಸ್ಥಾಪನೆಯ ಕಾರಣಗಳಾವವು ?
(೩) ಬಹಮನಿ ಅರಸರ ಕಾಲದ ಸ್ಥಿತಿಯನ್ನು ವರ್ಣಿಸಿರಿ.
(೪) ಭಾಗವತ ಪಂಥವೆಂದರೇನು ? ಅದನ್ನು ಯಾರು ಮುಂದುವರಿಸಿದರು ?

---

## ೧೫. ಯುರೋಪದಲ್ಲಿ ಧರ್ಮಕ್ರಾಂತಿ.

**ವಿದ್ಯೆಯ ಪುನರುಜ್ಜೀವನ:—**

ಕಾನ್‌ಸ್ಟಂಟಿನೋಪಲ್ಲವು ಕ್ರಿಶ್ಚನ್ ಸಾಮ್ರಾಜ್ಯದ ರಾಜಧಾನಿಯೆನಿಸಿದಾಗ, ಅಲ್ಲಿ ಗ್ರೀಕ ಮತ್ತು ಲ್ಯಾಟಿನ್ ಭಾಷೆಗಳ ಅಭ್ಯಾಸ ನಡಿಸುವ ಕೆಲವು ಕೇಂದ್ರಗಳಿದ್ದವು. ಮಹಮ್ಮದೀಯರು ತುರ್ಕಸ್ಥಾನವನ್ನು ಆಕ್ರಮಿಸಿದ ಮೇಲೆ ಕಾನ್‌ಸ್ಟಂಟಿನೋಪಲ್ಲದೊಳಗಿನ ವಿದ್ವಜ್ಜನರು ತಮ್ಮ ಗ್ರಂಥಗಳನ್ನು ಕಟ್ಟಿಕೊಂಡು, ಯುರೋಪದ ದೇಶದೇಶಗಳಲ್ಲಿ ಅಲೆದಾಡಹತ್ತಿದರು. ಇವರು

ಅಲ್ಲಲ್ಲಿ ನೆಲೆಸಿ ತಮ್ಮ ವಿದ್ಯಾಪ್ರಸಾರ ಮಾಡಿದರು ಮೇಲಾಗಿ ಮುದ್ರಣ ಕಲೆಯು ಇದೇ ವೇಳೆಗೆ ಶೋಧವಾಗಿ ಗ್ರಂಥಗಳ ಪ್ರತಿಗಳು ಹಚ್ಚಾಗಹತ್ತಿದವು. ಈ ರೀತಿ ಜ್ಞಾನಪ್ರಸಾರವಾಗಿ ಸ್ವತಂತ್ರ ಮತ್ತು ಚಿಕಿತ್ಸಾತ್ಮಕ ಬುದ್ಧಿಯು ಜನರಲ್ಲಿ ಬೆಳೆಯಿತು. ಖಗೋಲ, ಭೂಗೋಲಗಳಲ್ಲಿ ಆದ ಕೆಲವು ಸಂಶೋಧನಗಳು ಜನರ ವಿಚಾರ ಪಥಕ್ಕೆ ಶಾಸ್ತ್ರೀಯ ದೃಷ್ಟಿಯನ್ನು ಕೊಟ್ಟವು.

**ಕ್ರಾಂತಿಯ ಕಾಲ.—**

ಏಸುವಿನ ಮರಣದ ನಂತರ ಪಾಲ ಎಂಬ ಒಬ್ಬ ವಿದ್ವಾಂಸನಿಂದ ಕ್ರಿಸ್ತಮತವು ದೂರ ದೇಶಗಳಿಗೆ—ಗ್ರೀಸ, ರೋಮು ಮುಂತಾದವುಗಳಿಗೆ ಹಬ್ಬಿತೆಂಬುದನ್ನು ಈ ಮೊದಲೆ ತಿಳಿದಿವಷ್ಟೆ ? ರೋಮು ನಗರವಲ್ಲ ಕ್ರಿಸ್ತ ಮತದ ಕೇಂದ್ರವು ನೆಲೆಯಾಯಿತು. ಈ ಕೇಂದ್ರದ ಸ್ಥಳದಿಂದ ಕ್ರಿಸ್ತ ಪುರೋಹಿತರು ದೂರ ದೂರ ದೇಶಗಳಿಗೆ ಹೋಗಿ ಅಲ್ಲಿ ಧರ್ಮಬೋಧೆಯನ್ನೂ ಧರ್ಮಕಾರ್ಯಗಳನ್ನೂ ನಡಿಸಿದರು. ಇತರರಿಗೆ ಓದುಬರಹ ಬಾರದ ಈ ಕಾಲದಲ್ಲಿ ಪುರೋಹಿತರ ಹೇಳಿಕೆಗಳೇ ಪ್ರಮಾಣವೆನಿಸಿದವು-ಧರ್ಮಬೋಧೆಯ ಅಧಿಕಾರವು ಇವರಿಗೆ ಮೀಸಲಿರಿಸಿರುವಾಗ ಈ ಕಾಲದಲ್ಲಿ ಪುರೋಹಿತ ವರ್ಗಕ್ಕೆ ಅಗೌರವ ತೋರುವದು ಮಹಾಪಾತಕವೆನಿಸಿತು. ಇಂಥ ಅಪರಾಧಗಳಿಗೆ ಉಗ್ರಶಾಸನವಾಯಿತು. ಈ ಕಾಲದಲ್ಲಿ ಪ್ರಚಾರದಲ್ಲಿದ್ದ ಕ್ರಿಸ್ತ ಮತಕ್ಕೆ ರೋಮನ್ ಕೆಥೊಲಿಕ ಮತವೆಂಬ ಹೆಸರು.

ಬೈಬಲ ಎಂಬ ಕ್ರಿಸ್ತ ಮತ ಗ್ರಂಥವು, ಇಷ್ಟರಲ್ಲಿ ಯುರೋಪದ ಎಲ್ಲ ಭಾಷೆಗಳಲ್ಲಿಯೂ ಭಾಷಾಂತರವಾಯಿತು. ಜನಸಾಮಾನ್ಯರು ಓದುಸಂ[illegible] ಆಗಿ, ಪುರೋಹಿತ ವರ್ಗದವರು ಧರ್ಮದ ಹೆಸರಿನಲ್ಲಿ ನಡಿಸಿದ [illegible]ಗಳನ್ನು ಇವರು ಪ್ರತಿಭಟಿಸಿದರು. ಇಂಗ್ಲಂಡದಲ್ಲಿಯೂ ಉಳಿದ ಯುರೋಪದ ರಾಷ್ಟ್ರಗಳಲ್ಲಿಯೂ ಜಾನ್ ವಿಕ್ಲಿಫ್, ಇರ್ಯಾಸ್ಮಸ್, ಜಾನ್ ಹಸ್ ಎಂಬವರು ಪ್ರಸಿದ್ಧಿ ಪಡೆದರು. ರೋಮು ರಾಜ್ಯದಲ್ಲಿ ನೆಲೆಸಿದ ಪೋಪ ಎಂಬ ಧರ್ಮಗುರುವು ಎಲ್ಲ ಪುರೋಹಿತರಿಗೆ ಶ್ರೇಷ್ಠನೆನಿಸಿದನು ಜನರು ಮಾಡಿದ ಪಾಪವಿಮೋಚನೆಗೆ ಪೋಪನು ಇಂಡಲ್ಜನ್ಸ ಎಂಬ ಕ್ಷಮಾಪತ್ರ

ಗಳನ್ನು ಮಾರುವದು ಜನರಿಗೆ ಇನ್ನೂ ಹೇಯವೆನಿಸಿತು ಇದನ್ನು ಪ್ರತಿ
ಭಟಿಸಿ ಯುಟೋಪಿಯಾ ಮುಂತಾದ ಹೊತ್ತಿಗೆಗಳು ಹೊರಬಿದ್ದು, ಪೋಪನ
ದೋಷಗಳನ್ನು ಹೊರಗೆಳೆದವು ಧನವಂತರಿಗೆ ಪಾಪಲೇಪವಿಲ್ಲೆಂಬ ಭಾವ
ನೆಯು ತಲೆದೋರಿ, ದರಿದ್ರರು ಮಾತ್ರ ಪಾಪಕೂಪದಲ್ಲಿ ಹೊರಳಲು ಹೊಣೆ
ಗಾರರೆಂಬ ಕಲ್ಪನೆಯು ಒಡಮೂಡಿತು.

## ಮಾರ್ಟಿನ್ ಲ್ಯೂಥರ —

೧೬ನೆಯ ಶತಮಾನದ ಆರಂಭದಲ್ಲಿ ಮಾರ್ಟಿನ್ ಲ್ಯೂಥರ ಎಂಬಾ
ತನು ಮಹತ್ವದ ಆಕ್ಷೇಪವನ್ನು ಧರ್ಮಾಧಿಕಾರಿಗಳೆದುರು ಒಡ್ಡಿದನು.
ಎಂಟನೆಯ ರೋಮದ ಪೋಪನ ಕ್ಷಮಾಪತ್ರಗಳು ಜರ್ಮನಿಗೂ ವಿಕ್ರಯ
ಕ್ಕಾಗಿ ಬಂದವು ಇವನ್ನು ಮಾರ್ಟಿನ್ ಲ್ಯೂಥರನು ಬಲವಾಗಿ ವಿರೋಧಿಸಿ
ದನು. ಇವುಗಳನ್ನು ಕೊಳ್ಳಬೇಕೆಂದು ಬೈಬಲಿನಲ್ಲಿ ಹೇಳಿಲ್ಲವೆಂದು ಸಾರಿ
ದನು ಈ ವಿಷಯದ ಬಗ್ಗೆ ಒಂದು ಪತ್ರಿಕೆಯನ್ನು ಹೊರಡಿಸಿ ತನ್ನ
ಊರಾದ ವಿಟೆನ್‌ಬರ್ಗದ ಅಗಸಿಯ ಬಾಗಿಲಿಗೆ ಅಂಟಿಸಿದನು ಮತ್ತು
ಪೋಪನನ್ನು ಈ ಮಾತಿಗಾಗಿ ವಾದಕ್ಕೆ ಆಹ್ವಾನವಿತ್ತನು ನಂತರ ಇವನು
ಧರ್ಮಗ್ರಂಥಗಳನ್ನು ಸೂಕ್ಷ್ಮವಾಗಿ ಓದಹತ್ತಿ ಪೋಪನ ಅಧಿಕಾರದ ಮೂಲ
ವನ್ನೇ ಇವನು ಅಲ್ಲಗಳೆಯುವಂತಾದನು. ಮತ್ತು ಎಷ್ಟೋ ಹೊಸ ಆಚಾರ
ಗಳನ್ನು ಪೋಪನು ತನ್ನ ಲಾಭಕ್ಕಾಗಿ ಧರ್ಮದಲ್ಲಿ ಹೊಗಿಸಿರುವನೆಂದು
ಸಾರಿದನು. ಆದ್ದರಿಂದ ಬೈಬಲವನ್ನೆ ಪ್ರಮಾಣವೆಂದು ಹಿಡಿಯಬೇಕೆಂದು
ಇವನು ಉಪದೇಶಿಸಿದನು. ಇತ್ತ ಪೋಪನು ಇವನ ಮೇಲೆ ಬಹಿಷ್ಕಾರ
ಹಾಕಿದನು ಲ್ಯೂಥರನು ಬಹಿಷ್ಕಾರ ಪತ್ರಿಕೆಯನ್ನು ಸುಟ್ಟು, ಪೋಪನ
ಸತ್ತೆಯು ತನಗೆ ಮಾನ್ಯವಿಲ್ಲೆಂದು ಸಾರಿದನು. ಅನೇಕರು ಇವನ ಶಿಷ್ಯರಾ
ದರು. ಈ ಧರ್ಮಸುಧಾರಣೆಯು ಜರ್ಮನಿಗಷ್ಟೇ ನಿಲ್ಲದೆ, ಇತರ ರಾಷ್ಟ್ರ
ಗಳಿಗೂ ಹಬ್ಬಿತು ಇದಕ್ಕೆ ಪ್ರೊಟೆಸ್ಟಂಟ ಪಂಥ— ಪೋಪನ ಅಧಿಕಾರವನ್ನು
ಅಲ್ಲಗಳೆಯುವ ಪಂಥ ಎಂದು ಪ್ರಸಿದ್ಧವಾಯಿತು. ಪೋಪನ ಸತ್ತೆಯನ್ನು
ಮನ್ನಿಸುವವರಿಗೆ ರೋಮನ್ ಕಾಥೋಲಿಕ್ ಎಂದು ಅನ್ನುವರು.

ಲ್ಯೂಥರನು ಜರ್ಮನಿಯಲ್ಲಿ ಜನಿಸಿದನು. ತಂದೆ ಬಡವ. ಕಣಿಯಲ್ಲಿ

ಕೆಲಸ ಮಾಡುವವ. ಆದರೂ ಮಗನಿಗೆ ಉಚ್ಚ ಶಿಕ್ಷಣವನ್ನು ಕೊಟ್ಟನು. ರೋಮದಲ್ಲಿ ತತ್ವಜ್ಞಾನವನ್ನು ಅಭ್ಯಸಿಸಿ, ಮರಳಿ ಬಂದು ವಿಟನ್‌ಬರ್ಗದ ವಿಶ್ವವಿದ್ಯಾಲಯದಲ್ಲಿ ತತ್ವಜ್ಞಾನದ ಅಧ್ಯಾಪಕನಾದನು ನಂತರ ಪೋಪ ನನ್ನು ವಿರೋಧಿಸಿದನು ಈ ರೀತಿ ಮಾರ್ಟಿನ್ ಲ್ಯಾಥರನು ಪ್ರೊಟೆಸ್ಟಂಟ ಪಂಥದ ಉತ್ಪಾದಕನೆನಿಸಿದನು

## ಪ್ರಶ್ನಾವಲಿ —

(೧) ಯುರೋಪದಲ್ಲಿಯು ಮತ್ತು ಭಾರತದಲ್ಲಿಯು ವಿದ್ಯೆಯ ಪ್ರಾಚೀನತೆ ಗಳನ್ನು ಹೋಲಿಸಿ ಬರಯಿರಿ.

(೨) ಧರ್ಮಕ್ರಾಂತಿ ಅಂದರೇನು ? ಉದಾಹರಣೆ ಸಹಿತ ವಿವರಿಸಿರಿ.

(೩) ಮಾರ್ಟಿನ್ ಲೂಥರನು ಮಾಡಿದ ಮಹತ್ಕಾರ್ಯವೇನು ?

(೪) ಭಾರತದಲ್ಲಿ ಈ ಕಾಲಕ್ಕೆ ಧರ್ಮದ ಸ್ಥಿತಿ ಏನಿತ್ತು ?

---

# ೧೬. ಮೊಗಲ ಬಾದಶಹರು.

ಮಧ್ಯಕಾಲದ ಭಾರತದ ಕಥೆಯಲ್ಲಿ, ದಿಲ್ಲಿಯ ರಜಪೂತರು ಮಹ ಮ್ಮದೀಯರಿಗೆ ಸೋತರೆಂಬುದನ್ನೂ ಬರಬರುತ್ತ ಮಹಮ್ಮದೀಯರು ದಿಲ್ಲಿ ಯಲ್ಲಿ ಹೇಗೆ ನೆಲೆಸಿದರೆಂಬುದನ್ನೂ ನಾವು ಕಲಿತದ್ದಾಯಿತು. ಕ್ರ.ಶ. ೧೫೨೬ ರಲ್ಲಿ ಇಬ್ರಾಹಿಮ ಲೋಡಿ ಎಂಬ ಅರಸನು ಮೊಗಲ ಅರಸನಾದ ಬಾಬರನ ಕೂಡ ಪಾನಿಪತ ಎಂಬಲ್ಲಿ ಯುದ್ಧಮಾಡಿ ಸೋತು ಮಡಿಯಲಾಗಿ, ದಿಲ್ಲಿಯ ಪಟ್ಟದ ಮೇಲೆ ಬಾಬರನು ಕುಳಿತು ರಾಜ್ಯಭಾರ ನಡಿಸಿದನು ಇವನ ವಂ ಶವು ಮೊಗಲ ವಂಶವೆಂದು ಹೆಸರು ಪಡೆದಿದೆ ಬಾಬರನು ಪಾನಿಪತ್ತದ ಹೊರತಾಗಿ ಒಂದೆರಡು ಯುದ್ಧಗಳನ್ನು ರಜಪೂತರೊಡನೆ ನಡಿಸಿ ತನ್ನ ಬಲ ವನ್ನೂ ರಾಜ್ಯವನ್ನೂ ಬೆಳೆಸಿದನು. ಇವನು ತುರ್ಕಿ ಭಾಷೆಯಲ್ಲಿ ಕೆಲವು ಕವನಗಳನ್ನು ರಚಿಸಿರುವನಲ್ಲದೆ, ತನ್ನ ಆತ್ಮ ಚರಿತೆಯನ್ನು ಬರೆದು, ಆಗಿನ ಕಾಲದ ಭಾರತದ ವರ್ಣನೆಯನ್ನು ನಮಗೆ ತಿಳಿಸಿರುವನು.

### ಹುಮಾಯೂನನು:—

ನಾಲ್ಕು ವರ್ಷ ರಾಜ್ಯವಾಳಿ ಬಾಬರನು ಮರಣ ಹೊಂದಿದ ನಂತರ ಇವನ ಮಗನಾದ ಹುಮಾಯೂನ ಎಂಬವನು ದಿಲ್ಲಿಯ ರಾಜನೆನಿಸಿದನು. ಇವನ ಕಾಲಕ್ಕೆ ಬಂಗಾಲದ ಶೇರಶಹನೆಂಬ ಸರದಾರನು ಕೆಲವು ಕಾಲ ದಿಲ್ಲಿಯ ಪಟ್ಟವನ್ನು ಆಕ್ರಮಿಸಿ ಆಳಿದನು ಕಷ್ಟಬಡುತ್ತ, ಹುಮಾಯೂನನು ಇರಾಣದ ಅರಸನಿಂದ ಸಹಾಯ ಪಡೆದು, ದಿಲ್ಲಿಯ ಪಟ್ಟವನ್ನು ಮರಳಿ ಪಡೆದನು ನಂತರ ಇವನಾದರೂ ಬಹುದಿವಸ ರಾಜ್ಯ ನಡಿಸಲಿಲ್ಲ. ಒಂದು ದಿನ ಅಟ್ಟದ ಮೇಲಿಂದ ಇಳಿದು ಬರುವಾಗ ಕಾಲು ಜಾರಿ ಬಿದ್ದು, ಮರಣ ಹೊಂದಿದನು ಬಳಿಕ ಇವನ ಮಗನಾದ ಅಕಬರನೆಂಬವನು ಪಟ್ಟವೇರಿದನು ಇವನನ್ನು ಘನವಂತನಾದ ಅಕಬರನೆಂದು ಜನರು ಕರೆಯುವದುಂಟು. ಇವನು ೧೫೫೬ರಿಂದ ೧೬೦೫ರ ವರೆಗೆ ರಾಜ್ಯಭಾರ ಮಾಡಿದನು.

### ಅಕಬರನು:—

ಇವನ ರಾಜ್ಯವು ಉತ್ತರ ಹಿಂದುಸ್ಥಾನದಲ್ಲೆಲ್ಲ ಹಬ್ಬಿತ್ತು. ರಜಪೂತರಲ್ಲಿ ಪ್ರಮುಖರಾದ ಜೋಧಪುರ, ಜಯಪುರ, ಅಜಮೀರ, ರತನಭೋರ, ಮುಂತಾದವುಗಳ ಅರಸರು ಅಕಬರನ ಸ್ನೇಹಿತರೂ ರಾಜ್ಯಪೋಷಕರೂ, ಆಗಿದ್ದರು. ಅಕಬರನ ರಾಜ್ಯವಿಸ್ತಾರವು ಬರೇ ವಿಜಯಗಳ ಮೇಲೆ ಅವಲಂಬಿಸಿರಲಿಲ್ಲ, ಪ್ರಜರ ಮತ್ತು ನೆರೆಹೊರೆಯ ರಾಜರ ಮನಸ್ಸೆಳೆಯುವ ಬೇರೆ ಕೆಲವು ವಿಧಾನಗಳು ಅಕಬರನಲ್ಲಿದ್ದವು. ಅವೆಂದರೆ--ಶರೀರಸಂಬಂಧ, ಶರಣಾಗತರಿಗೆ ದಯೆ, ಮತ್ತು ಅವರ ರಾಜ್ಯಗಳನ್ನು ಬಿಟ್ಟುಬಿಡುವಿಕೆ ಜಯಪುರದ ಬಿಹಾರಿಮಲ್ಲನ ಮಗಳನ್ನು ಮದುವೆಯಾಗಿ ಇವೆರಡು ಮನೆತನಗಳಲ್ಲಿ ಸ್ನೇಹಹಿತಸಂಬಂಧಗಳನ್ನು ಬೆಳಿಸಿದನು ಜೋಧಪುರದ ಉದಯಸಿಂಗನು ತನ್ನ ತಂಗಿಯನ್ನು ಅಕಬರನಿಗೆ ಮದುವೆ ಮಾಡಿಕೊಟ್ಟನು ಇವೆರಡು ಮನೆತನಗಳು ಮೊಗಲರ ಆದರಲ್ಲಿಯೂ ಅಕಬರನ ಏಳ್ಗೆಗಾಗಿ ಬಹಳ ಹೆಣಗಾಡಹತ್ತಿದವು ಭಗವಾನದಾಸನು ತನ್ನ ಮಗಳನ್ನು ಅಕಬರನ ಮಗ ಸಲೀಮನಿಗೆ ಕೊಟ್ಟು ಮದುವೆ ಮಾಡಿದನು. ಈ ಮದುವೆಗಳಿಂದ ಹಿಂದೂ

ಆಚಾರ ವಿಚಾರಗಳು ಮೊಗಲರ ಮನೆಯಲ್ಲಿ ಹೊಕ್ಕವು. ಮೆಲ್ಲಮೆಲ್ಲನೆ ಅರಮನೆಯಲ್ಲಿಯೂ ಇತರ ಚಟುವಟಿಕೆಗಳಲ್ಲಿಯೂ ತಮ್ಮ ವರ್ಚಸ್ಸನ್ನು ಬೀರಹತ್ತಿದವು ಹಿಂದೂ ಜನರ ಅರಸನಾಗಿ ತಾನು ಅವರನ್ನು ಯೋಗ್ಯ ರೀತಿಯಿಂದ ನಡಿಸಿಕೊಳ್ಳುವದು ನ್ಯಾಯವೆಂದು ಅಕಬರನು ಜಜಿಯಾ ಕರವನ್ನೂ, ಹಿಂದೂ ಯಾತ್ರಿಕರ ಕರವನ್ನೂ ಕಿತ್ತೊಗೆದನು ಇವೆಲ್ಲ ಕರಗಳು ಹಿಂದೂ ಜನರಿಗೆ ಅಪಮಾನವೆನಿಸಿದ್ದವು

ಕೊನೆಯದಾಗಿ ಅಕಬರನ ಔದಾರ್ಯವು ಹಿಂದೂ ಜನರ ಮನಸ್ಸನ್ನು ಒಲಿಯಿತು. ತಾನು ಗೆದ್ದ ರಾಜಮನೆತನಗಳನ್ನು ಅಕಬರನು ಎಂದೂ ನಾಶ ಮಾಡಲಿಲ್ಲ ಅವರನ್ನು ಮಾಂಡಲಿಕರನ್ನಾಗಿ ಮಾಡಿಕೊಂಡು ತನ್ನ ಸಾಮ್ರಾಜ್ಯದ ರಕ್ಷಣೆಗೆ ಆಧಾರಸ್ತಂಭರನ್ನಾಗಿ ಮಾಡುತ್ತಿದ್ದನು

ಈ ರೀತಿಯಾಗಿ ಉತ್ತರ ಹಿಂದುಸ್ತಾನದ ಬಹುತರ ಎಲ್ಲ ರಜಪೂತ ಅರಸರು ಅಕಬರನಿಗೆ ಒಂದಿಲ್ಲೊಂದು ರೀತಿಯಿಂದ ಹೊಂದಿಕೊಂಡರು. ಆದರೆ ಉದೇಪುರದ ಉದಯಸಿಂಗನೆಂಬ ರಜಪೂತ ಅರಸನ ಮಗನಾದ ಪ್ರತಾಪಸಿಂಗನೆಂಬವನು ಮಾತ್ರ ಅಕಬರನಿಗೆ ತಲೆಬಾಗಲಿಲ್ಲ. ಅಕಬರನ ಮಗನಾದ ಜಹಾಂಗೀರನು ಇವನೊಡನೆ ಅಖಂಡ ೨೫ ವರ್ಷ ಯುದ್ಧ ನಡಿಸಿ ಪ್ರತಾಪನನ್ನು ಅಡವಿಯ ಪಾಲು ಮಾಡಿದನು. ಈ ಕಾಲದಲ್ಲಿ ಹಳದೀ ಘಟ್ಟದ ಯುದ್ಧವು ಅತಿ ಭಯಂಕರವಾಯಿತು. ವಿಂಧ್ಯಾಟವಿಯಲ್ಲಿ ಕಂದ ಮೂಲಗಳನ್ನು ತಿಂದು ಹೆಂಡಿರುಮಕ್ಕಳನ್ನು ಗೋಳಿಗೀಡುಮಾಡಿದರೂ ಮುಹಮ್ಮದೀಯರಿಗೆ ತಲೆಬಾಗಲಿಕ್ಕಿಲ್ಲೆಂಬ ತನ್ನ ಪ್ರತಿಜ್ಞೆಯನ್ನು ಪ್ರತಾಪನು ಕೊನೆಗಾಣಿಸಿದನು. ಅಕಬರನ ಆಳಿಕೆಯ ಕೊನೆಯ ಕಾಲದಲ್ಲಿ ಪ್ರತಾಪನು ತನ್ನ ರಾಜ್ಯದ ಬಹು ಭಾಗವನ್ನು ಮರಳಿ ಗೆದ್ದುಕೊಂಡಿದ್ದನು ಪ್ರತಾಪನ ನಂತರ ಇವನ ಮಗನಾದ ಅಮರಸಿಂಹನು ಮುಹಮ್ಮದೀಯರ ಬಲವನ್ನು ತಡೆಯಲಾರದೆ ಜಹಾಂಗೀರನಿಗೆ ಶರಣು ಹೋದನು. ಪ್ರತಾಪನು ತನ್ನ ಹಟವನ್ನು ಸಾಧಿಸಲು ಪಟ್ಟ ಕಷ್ಟಗಳ ವರ್ಣನೆಯನ್ನು ರಜಪೂತ ಲಾವಣಿಕಾರರು ಇನ್ನೂ ಹಾಡಿ ಜನರನ್ನು ಚೇತರಿಸುವದುಂಟು.

ಅಕಬರನು ಚಿಕ್ಕವನಿದ್ದಾಗ ಪ್ರಸಿದ್ಧ ಚಿತ್ರಕಾರರಿಬ್ಬರಿಂದ ಚಿತ್ರಕಲೆ ಯನ್ನು ಕಲಿತಿದ್ದನು. ಚಿತ್ರಕಲೆಯು ಎಲ್ಲ ಮಾದರಿಗಳೂ ಇವನ ಮನಸ್ಸ [illegible] ಹಳದಿಘಟ್ಟದ ಯುದ್ಧದಲ್ಲಿ ಪ್ರತಾಪನ ಕಡೆಗಿದ್ದು ಕಲಿಗಳೆನಿಸಿ [illegible] ಮತ್ತು [illegible] ಎಂಬ ಬಾಲಕರ ಪುತ್ತಳಿಗ[illegible]ಸಿ. [illegible] ಅಕಬರನು [illegible]ಚಿತ್ರಕಾರರಿಗೆ [illegible]ಮಾದರಿಯನ್ನು [illegible] ಚಿತ್ರಕಲೆಗೆ ಒಂದು ಹೊಸ ರೂಪವನ್ನು ಕೊಟ್ಟನು. ಮೊದ ಲಿನಿಂದ ಇದ್ದ [illegible], ಬರಬರುತ್ತ ಹಿಂದೀ ಪಾರ್ಶಿ ಮಿಶ್ರಿತವಾದ [illegible] ಇವರಲ್ಲಿ ಬಣ್ಣ ಬ ಣ್ಣಗ[illegible] ಅಕಬರನ ಕಾಲದ ಚಿತ್ರಕಲೆಯು ಪರಂಪರೆಗೆ [illegible], [illegible]ತನಿಷ್ಠವೂ ಆಗಿತ್ತು

ಗಾಯನ ಕಲೆಯಲ್ಲಿ ಅಕಬರನ ಆಸಕ್ತಿ ಅಪ್ರತಿಮವಾಗಿತ್ತು.

ಅಕಬರನ ಕಾಲದ ಶಿಲ್ಪಕಲೆಯೂ ಸಹ ಹಿಂದೂ-ಮುಸಲ್ಮಾನ ರೀತಿ ಗಳ ಸಂಗಮವೇ ಆಗಿದೆ. ಶಿಲ್ಪಕಲೆಯಲ್ಲಿ ಈತನಿಗೆ ಬಹಳ ಅಭಿರುಚಿ ಇತ್ತು. ಆಗ್ರಾ, ಕೋಟೆಯೂ, ಫತ್ತೇಪುರ ಸಿಕ್ರಿಯ ಅರಮನೆಯೂ, ಅದ್ವಿತೀ ಯವಾಗಿದ್ದು, ಇಂದಿಗೂ ಆತನ ಹೆಸರನ್ನು ಎತ್ತಿ ಹಿಡಿದಿವೆ

ಇವನ ಕಾಲಕ್ಕೆ ತುಳಸೀದಾಸನೆಂಬ ಹಿಂದೀ ಕವಿಯು ಜೀವಿಸಿ ದನು. ಇವನು ಬರೆದ ಹಿಂದೀ ರಾಮಾಯಣವು ಬಹು ಪ್ರಸಿದ್ಧವಾದ ಗ್ರಂಥವು. ಆಗಿನ ಕವಿಗಳಲ್ಲಿ ಈತನು ಬಹು ಉದ್ದಾಮನು. ಇದಲ್ಲದೆ, ಪಾರ್ಶಿ ಭಾಷೆಯಲ್ಲಿ ಕವಿಕೆ [illegible] ಕೃಷಿಗೂ ಬಹಳ ಮಹತ್ವವಿತ್ತು.

ಸೂಫಿ ಮತದಲ್ಲಿ ವಿಶ್ವಾಸವಿಟ್ಟ ಅಕಬರನು ಉಳಿದ ತತ್ವಗಳನ್ನು ಬಹಳ ನಿರಾಕರಿಸಿದನು. ಇದಕ್ಕಾಗಿ ಕೆಲ ಜನರಿಗೆ ತ್ರಾಸ ಕೊಟ್ಟನು. ಚಿಕ್ಕಂದಿ ನಿಂದಲೂ ಇವನು ತನ್ನ ಧರ್ಮದ ಅಂಧಾನುಕರಣ ಮಾಡಲಿಲ್ಲ. ಯೋಗಿ ಸಿದ್ಧ ಇದ್ದವನಂತೆ ಅಕಬರನು ಒಮ್ಮೊಮ್ಮೆ ವರ್ತಿಸುತ್ತಿದ್ದನು. ತನಗೆ ದೇವರ ಸಾಕ್ಷಾತ್ಕಾರವಾದವನಂತೆ ತೋರ್ಪಡಿಸುತ್ತಿದ್ದನು.

ಮೊದಮೊದಲು ಅಕಬರನು ನಿಷ್ಠಾವಂತ ಮುಸಲ್ಮಾನನಾಗಿದ್ದನು. ನಮಾಜು ಮಾಡುವದೂ, ಮಶೀದೆಗಳನ್ನು ಕಟ್ಟುವದೂ ಅವನ ಚಟುವಟಿಕೆ

ಗಳಾಗಿದ್ದವು. ಆದರೆ ಬರಬರುತ್ತ ತನ್ನ ಧರ್ಮದಲ್ಲಿ ಅಕಬರನ ವಿಶ್ವಾಸವು ಹಾರಿತು. ಯಾಕೆಂದರೆ, ಅವನು ವಾರಕ್ಕೊಮ್ಮೆ ಸರ್ವಧರ್ಮಗಳ ಪ್ರತಿನಿಧಿಗಳ ಪರಿಷತ್ತು ನೆರೆಸುತ್ತಿದ್ದನು ಇಂಥ ಪರಿಷತ್ತುಗಳ ಚರ್ಚೆಯನ್ನು ತಾನು ಸ್ವತಃ ಹಾಜರಿದ್ದು ಕೇಳುತ್ತಿದ್ದನು ಜೈನ, ಫಾರ್ಶಿ, ಹಿಂದೂ, ಕ್ರಿಸ್ತ ಧರ್ಮಗಳ ಅನುಯಾಯಿಗಳು ಈ ಪರಿಷತ್ತಿನಲ್ಲಿ ತಮ್ಮ ಧರ್ಮಗಳ ತತ್ವಗಳನ್ನು ತಿಳಿಸಿ ಹೇಳುತ್ತಿದ್ದರು.

ಇದನ್ನೆಲ್ಲ ಕೇಳುತ್ತ, ಅಕಬರನು ತನ್ನದೇ ಒಂದು ಧರ್ಮವನ್ನು ರೂಪಿಸಿಕೊಂಡನು ದೇವರು ಒಬ್ಬನೇ ಅಂತಲೂ, ತಾನು (ಅರಸನು) ಅವನ ಪ್ರತಿನಿಧಿಯೆಂತಲೂ ಪ್ರತಿಪಾದಿಸಿದನು ಕಾಲ ಕಳೆದಂತ ಇದನ್ನು ಶೇಕ ಮುಬಾರಕ್ ಫಾಜಲ್, ಫೈಜಿ ಮುಂತಾದವರು ಅನುವಾದಿಸಿದರು. ಅಕಬರನು ಆರಿಸಿಕೊಂಡ ಧರ್ಮದ ಹೆಸರು ದಿನ್-ಇ ಲಾಹಿ ಆದರ ಈಗ ಇವನ ರೀತಿ ನಡತೆಗಳಲ್ಲಿ ಹಿಂದುತ್ವವೇ ಕಂಡುಬರುತ್ತಿತ್ತು ಒಮ್ಮೊಮ್ಮೆ ಹಿಂದು ಪೋಷಾಕು ಹಾಕಿ, ಹಣೆಗೆ ಗಂಧ ಹಚ್ಚಿ, ತಲೆಗೆ ಮುಂಡಾಸ ಸುತ್ತಿ, ತಾನು ಕ್ಷತ್ರಿಯ ಅರಸನೆಂದು ಹೆಮ್ಮೆಗೊಳ್ಳುತ್ತಿದ್ದನು.

**ಜಹಾಂಗೀರನು ಮತ್ತು ಶಹಾಜಹಾನನು** (೧೬೦೬ ೧೬೫೮):—

ಮೊಗಲ ಮನೆತನದಲ್ಲಿ ಉಳಿದ ಅರಸರಿಗಿಂತಲೂ ಜಹಾಂಗೀರ-ಶಹಾಜಹಾನರ ಕಾಲದಲ್ಲಿ ಶಾಂತತೆಯು ನೆಲೆಸಿತ್ತು ಇವರಿಬ್ಬರ ಕಾಲದಲ್ಲಿ ಬೇರೆ ಅರಸರ ಉಗ್ರದಾಳಿಯು ಆಗಲಿಲ್ಲ. ಅರಸರ ಅಧಿಕಾರವು ಎಂದೂ ಧಿಕ್ಕರಿಸಲ್ಪಡಲಿಲ್ಲ. ಒಂದೆರಡು ಸೋಲುಗಳಾಗಿದ್ದರೂ ಅವು ಮೊಗಲ ಸಿಂಹಾಸನವನ್ನು ಅಲುಗಾಡಿಸಲಿಲ್ಲ. ಆದರೆ ದಕ್ಷಿಣದಲ್ಲಿ ಮರಾಠರು ಎದ್ದು, ಬಲಗೊಂಡು, ಮೊಗಲ ಅರಸರ ಹುಳುಕು ಹುಡುಕುತ್ತಿದ್ದರು ಇದರಿಂದ ಮೊಗಲ ಅಧಿಕಾರದ ಅಡಿಗಲ್ಲು ಅದಿರಿದ್ದರೂ, ಕಟ್ಟಡಕ್ಕೆ ಧಕ್ಕೆ ತಗಲಲಿಲ್ಲ. ಔರಂಗಜೇಬನ ಕಾಲದಲ್ಲಿ ಮೊಗಲ ಮನೆತನವು ಇಳಿತರಕ್ಕೆ [illegible]ವು ಹೇಳಬಹುದು ಆದರೆ ಮೊಗಲರ ಸ್ವಂತ ಅಧಿಕಾರವು ಅಲ್ಲಾಡಲಿಲ್ಲ.

ಕಲೆಯ ದೃಷ್ಟಿಯಿಂದ, ಈ ಕಾಲವು ಬಹು ಮಹತ್ವದ್ದು. ಶಿಲ್ಪಕಲೆಯಲ್ಲಿಯೂ ಇತರ ಕಲೆಗಳಲ್ಲಿಯೂ ಅತ್ಯುನ್ನತ, ಉತ್ಕೃಷ್ಟ ಕಲಾಕೃತಿಗಳು

ಈ ಕಾಲದಲ್ಲಿ ಬೆಳಕಿಗೆ ಬಂದವು ಹಿಂದಿ ಫಾರ್ಶಿ ಮಿಶ್ರಿತ ಶಿಲ್ಪ ಕಲೆಯು ಈ ಕಾಲದಲ್ಲಿ ತಲೆದೋರಿತು ಶಹಾಜಹಾನನ ಕಾಲದ ಶಿಲ್ಪಕಲೆಯಲ್ಲಿ ನಯವೂ ತೇಜಸ್ಸೂ ಅಡಕವಾಗಿದ್ದವು ಮೇಲಾಗಿ ಅಪ್ರತಿಮ ಅಲಂಕಾರಗಳಿಂದ ಭೂಷಿತವಾಗಿದ್ದವು ಆದರೆ ಶಿಲ್ಪಕಲೆಯಲ್ಲಿ ಹಿಂದಿ ಲಕ್ಷಣಗಳು ಮಾತ್ರ ಅಡಗಲಿಲ್ಲ ಅಲ್ಲದೆ, ಅವು ಎದ್ದು ಕಾಣುವಂತಿದ್ದವು- ಈ ಕಾಲದ ಶಿಲ್ಪಕಲೆಯ ಶಿಖರವೆಂದರೆ ತಾಜಮಹಾಲ ಕಟ್ಟಡವು-



ದರಬಾರದಲ್ಲಿ ಕುಳಿತ ಶಹಾಜಹಾನನು.

ಇದನ್ನು ಕಟ್ಟಲಿಕ್ಕೆ ೨೦ ವರ್ಷಗಳು ತಗಲಿದವು. ಅಷ್ಟೇ ಹೆಚ್ಚಳವನ್ನು ಪಡೆದವುಗಳೆಂದರೆ ಆಗ್ರಾದ ಮೋತೀ ಮಶೀದೆ, ಮತ್ತು ದಿಲ್ಲಿಯ ಜುಮ್ಮಾಮಶೀದೆ.

ಶಹಾಜಹಾನ ಕಾಲದ ಚಿತ್ರಕಲೆಯಲ್ಲಿ ಪರ್ಶಿಯಾದ ವರ್ಚಸ್ಸಿನಕಿಂತ ಹಿಂದೂ ವರ್ಚಸ್ಸೇ ಹೆಚ್ಚಾಗಿತ್ತು- ಈ ಕಲೆಯಲ್ಲಿ ನಿಷ್ಣಾತರಾದವರು,

ಇಣಚಿಯ ಒಂದೇ ಕೂದಲಿನ ಕುಂಚದಿಂದ ಚಿತ್ರಗಳನ್ನು ತೆಗೆಯುತ್ತಿದ್ದರು. ಈ ಕಾಲದ ಚಿತ್ರಗಳು ಜೀವಕಳೆ ತುಂಬಿ ಬಹು ಮನೋರಂಜಕ ವಾಗಿರುವವು

ಹಿಂದೂ ಜನರಿಗೆ ತಮ್ಮ ಗುಡಿಗಳನ್ನು ಕಟ್ಟಲಿಕ್ಕೂ ಬಹು ವಿಧವಾಗಿ ಅಲಂಕರಿಸಲಿಕ್ಕೂ ಅಪ್ಪಣೆಯಿತ್ತು

**ಔರಂಗಜೇಬನು:—** (೧೬೫೮—೧೭೦೭)

ಶಹಾಜಹಾನನ ನಂತರ ಔರಂಗಜೇಬನು ಮೊಗಲ ಪಟ್ಟವನ್ನೇರಿದನು. ಔರಂಗಜೇಬನು ಸ್ವಧರ್ಮಭಾವನೆಗಳಿಂದ ಅಂಧನಾಗಿದ್ದನು. ತನ್ನ ರಾಜ್ಯದಲ್ಲೆಲ್ಲ ಸುನ್ನಿ ಮುಸಲ್ಮಾನರೇ ಇರಬೇಕೆಂದೂ, ಮತ್ತು ಇತರರೆಲ್ಲ ಖಲೀಫರ ಆಜ್ಞೆಯನ್ನು ಪಾಲಿಸಬೇಕೆಂದೂ ಆಶಿಸಿದನು. ಈ ಭಾವನೆಗಾಗಿ ತನ್ನ ಬೊಕ್ಕಸವನ್ನೂ ರಾಜಕಾರಣವನ್ನೂ ಉಪಯೋಗ ಮಾಡಲು ಸಿದ್ಧನಾದನು ರಾಜಕಾರಣದಲ್ಲಿ ಒಮ್ಮೊಮ್ಮೆ ಧರ್ಮವನ್ನು ಬಿಟ್ಟವನಂತೆ ತೋರಿಸಿದರೂ, ಸ್ವಧರ್ಮವು ಅವನಲ್ಲಿ ಒಡಮೂಡಿತ್ತು ಮತ್ತು ಅದರಂತೆ ವರ್ತಿಸಲು ಅವನು ಸದಾ ಪ್ರಯತ್ನಿಸುತ್ತಿದ್ದನು. ರಾಜಕಾರಣದಲ್ಲಿ ನೀತಿಯುಗೊಂದಲ ಬೇಡೆನ್ನುವವರಲ್ಲಿ ಇವನೊಬ್ಬನು ತನ್ನ ತಂದೆಯನ್ನೂ ಬಂಧುಗಳನ್ನೂ ಮಕ್ಕಳನ್ನೂ ನಡೆಸಿಕೊಂಡ ರೀತಿಯು ಬಹು ಹೀನವಾದುದು. ಇದಕ್ಕಾಗಿ ಅವನು ಎಂದೂ ಮರುಗಲಿಲ್ಲ.

ಇವನಿಗೆ ಪಟ್ಟವು ಸಿಕ್ಕ ಮೇಲೆ ಧರ್ಮಾಂಧತನವನ್ನು ಆಚರಣೆಗೂ ಹೊಂದಿಸಿದನು. ಹಿಂದೂ ವೇದ ಶಾಸ್ತ್ರಗಳನ್ನು ಕಲಿಯಬಾರದೆಂದು ಆಜ್ಞೆ ಹೊರಡಿಸಿದನು. ಕಾಶೀ ವಿಶ್ವನಾಥನ ಗುಡಿಗಳನ್ನು ಕೆಡಹಿದನು. ಮಥುರೆಯ ಕೇಶವ ದೇವಾಲಯವೂ ಕೆಡಹಲ್ಪಟ್ಟಿತು. ಜಜಿಯ ಹೀನವಾದ ಕರ ಮತ್ತೆ ಹೇರಲ್ಪಟ್ಟಿತು. ಔರಂಗಜೇಬನಿಗೆ ಇದರ ಪರಿಣಾಮವೇನಾಗುವದೆಂಬ ಎಚ್ಚರವಿರಲಿಲ್ಲ. ತನ್ನ ಸುತ್ತಲಿನ ಪ್ರಜರ, ರಾಜರ, ಜಹಗೀರದಾರರ, ವಿಶ್ವಾಸವನ್ನು ಕಳೆದುಕೊಂಡನು. ಔರಂಗಜೇಬನು ತನ್ನ ಸ್ವಂತ ಜೀವನವನ್ನು ಮುಸಲ್ಮಾನ ಫಕೀರರಂತೆ ಇಟ್ಟುಕೊಂಡಿದ್ದನು. ಕುರಾಣದ ಪ್ರತಿಗಳನ್ನು ಬರೆದು ಮಾರುತ್ತಿದ್ದನು. ಟೊಪ್ಪಿಗೆ ಹೊಲಿದು ಅವುಗಳನ್ನು ಮಾರಿ

ಬಂದ ಹಣದಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದನು. ದರ್ಬಾರದ ಆಡಂಬರವೆಲ್ಲ ಕುಗ್ಗಿತು. ಸಂಗೀತಾದಿ ಕಲೆಗಳಿಗೆ ಪ್ರೋತ್ಸಾಹನೆ ಇಲ್ಲದಂತಾಯಿತು. ತನ್ನ ಧರ್ಮದಲ್ಲಿ ಮಾತ್ರ ಅವನಿಗೆ ಅಚಲಶ್ರದ್ಧೆ ಇತ್ತು.

ಮೊದಲಿನ ಬಾದಶಹರಂತೆ ಇವನು ರಜಪೂತರಲ್ಲಿ ಸಲಿಗೆಇಡಲಿಲ್ಲ. ರಾಜಾ ಜಸವಂತಸಿಂಗನು ಜಮ್ರುಡದಲ್ಲಿ ಸತ್ತ ಬಳಿಕ ಔರಂಗಜೇಬನು ಅವನ ಹೆಂದಿರು ಮಕ್ಕಳನ್ನು ಹಿಡಿಯಲು ಪ್ರಯತ್ನಿಸಿದನು. ಜಸವಂತಸಿಂಗನ ಹೆಂಡತಿಯು ಮೇವಾಡದ ರಾಜಾಸಿಂಗನಿಗೆ ಮರೆಹೊಕ್ಕಳು. ಆದ್ದರಿಂದ ಮೇವಾಡ ಮಾರವಾಡಗಳ ರಾಜಮನೆತನಗಳ ಮತ್ತು ದಿಲ್ಲೀ ಸರಕಾರದ ನಡುವೆ ಯುದ್ಧ ಆರಂಭವಾಯಿತು. ಔರಂಗಜೇಬನು ತನ್ನ ಎಲ್ಲ ಮಕ್ಕಳನ್ನು ಇದರಲ್ಲಿ ತೊಡಗಿಸಿದನು

೧೬೮೧ ರಲ್ಲಿ ಔರಂಗಜೇಬನು ದಕ್ಷಿಣದಲ್ಲಿ ದಾಳಿ ಮಾಡಲು ಅನುವಾದನು. ಅದರಲ್ಲಿ ಮರಾಠರನ್ನು ಹಣಿಯುವದು ಇವನ ಮುಖ್ಯ ಕೆಲಸವಾಗಿತ್ತು

೧೬೮೭ ರಲ್ಲಿ ಔರಂಗಜೇಬನ ಮಗನಾದ ಮುಅಜಮನು ಗೋವಳಕೊಂಡವನ್ನು ಮುತ್ತಿಕೊಂಡನು ಬಲವಾದ ಮುತ್ತಿಗೆ ಹಾಕಿದರೂ ಕೋಟೆ ಕೈವಶವಾಗದ್ದರಿಂದ, ಔರಂಗಜೇಬನು ಕೊನೆಗೆ ಲಂಚಕೊಟ್ಟು, ಗುಪ್ತ ಮಾರ್ಗದಿಂದ ಕೋಟೆಯೊಳಗೆ ಪ್ರವೇಶಿಸಿದನು.

೧೬೮೬ ರಲ್ಲಿ ಬಿಜಾಪುರವು ಕೈವಶವಾಯಿತು. ಆದಿಲ್‌ಶಾಹಿ ವಂಶದ ಸಿಕಂದರನೆಂಬ ಅರಸನು ಶರಣಾಗತನಾದನು. ಬಳಿಕ ಎಷ್ಟೋ ದಿನ ಬಿಜಾಪುರವು ಹೀನಾವಸ್ಥೆಯಲ್ಲಿತ್ತು. ಬಿಜಾಪುರದ ಅರಸರು ಕಟ್ಟಿಸಿದ ಕಟ್ಟಡಗಳು ದಿಲ್ಲಿಯ ಅರಸರ ಕಟ್ಟಡಗಳನ್ನು ಮೀರುತ್ತವೆ.

೧೬೮೯ರಲ್ಲಿ ಸಂಭಾಜಿಯೂ ಅವನ ಮಂತ್ರಿ ಕಲುಷನೂ, ೮—೧೦ ಜನ ಅನುಚರರೂ, ಕೊಲ್ಲಲ್ಪಟ್ಟರು.

ಈ ಕಾಲದಲ್ಲಿ ದಕ್ಷಿಣದಲ್ಲಿ ಮರಾಠರರೂ ಉತ್ತರದಲ್ಲಿ ಶೀಖರೂ ರಾಜಕಾರಣದಲ್ಲಿ ನುಗ್ಗಿ ಪ್ರಬಲರಾಗತೊಡಗಿದರು.

**ಶೀಖರ ಉದಯ —**

ಮಧ್ಯಕಾಲದ ಭಾರತದಲ್ಲಿ ಭಾಗವತ ಪಂಥವು ತಲೆಯೆತ್ತಿತಷ್ಟೆ ? ಅದರ ಪುರಸ್ಕರ್ತರಾದ ರಮಾನಂದ, ನಾನಕ, ಚೈತನ್ಯ ಮುಂತಾದವರು ಭಕ್ತಿಯೆ ಮುಕ್ತಿದಾಯಕವೆಂದು ಬೋಧಿಸಿ ಐಹಿಕ ವಿಷಯಗಳು ಹೇಯವೆಂಬ ಕಲ್ಪನೆಯನ್ನು ಮುಂದೆ ಮಾಡಿದರು ಇದೇ ವೇಳೆಗೆ ಪಂಜಾಬದಲ್ಲಿ ಶೀಖ ಪಂಥವು ಬೆಳಕಿಗೆ ಬರಹತ್ತಿತು. ಇದರ ಮೂಲ ಪುರುಷನಾದ ಗುರುನಾನಕನು ಐಹಿಕ ವಿಷಯಗಳ ಕಡೆಗೆ ಗಮನವಿತ್ತು ಜಾತಿ, ರಾಜಕಾರಣ, ಸಾಮಾಜಿಕ ಪರಿಸ್ಥಿತಿಗಳಲ್ಲೆಲ್ಲ ಏಕರೂಪತೆ ಇರಬೇಕೆಂದು ಬೋಧಿಸಿದನು ಗುರು ನಾನಕನ ಶಿಷ್ಯರಿಗೆ ಶೀಖರೆಂದು ಕರೆಯುವದುಂಟು

**ನಾನಕನ ಜೀವನ ಚರಿತೆ:—**

ನಾನಕನು ಲಾಹೋರದ ಬಳಿಯಲ್ಲಿ ನೆಲಿಸಿದ್ದ ಕೌಲು ಎಂಬೋರ್ವ ಚಿಕ್ಕ ಧಾನ್ಯ ವ್ಯಾಪಾರಿಯ ಮಗನು. ಕ್ರಿ. ಶ ೧೪೬೯ ರಿಂದ ೧೫೩೮ರ ವರೆಗೆ ಜೀವಿಸಿದ್ದನು ಚಿಕ್ಕಂದಿನಲ್ಲಿಯೇ ಒಂದು ಮಹಮ್ಮದೀಯ ಗ್ರಂಥಗಳನ್ನು ಓದಿದನು. ಮಕ್ಕಾ ಯಾತ್ರೆಯನ್ನು ಮಾಡಿದ್ದಾಯಿತು. ಮೊದಲು ವಿರಕ್ತನಾಗಿ ಬಹು ದಿವಸದ ಮೇಲೆ ಮದುವೆಯಾಗಿ ಪ್ರಪಂಚ ಹೂಡಿದನು. ಶ್ರೀ ಚಂದ ಮತ್ತು ಲಕ್ಷ್ಮಿ ದಾಸರೆಂಬ ಮಕ್ಕಳನ್ನು ಪಡೆದನು. ಬಾಬರನು ಇವನನ್ನು ಸನ್ಮಾನಿಸಿದಂತೆ ಕಾಣುವದು ಕ್ರಿ ಶ ೧೫೭೭ ರಲ್ಲಿ ಅಕಬರನು ಈ ಮತದ ನಾಲ್ಕನೆಯ ಗುರುವಿಗೆ ಅಮೃತಸರದ ಹತ್ತಿರ ಕೆಲವು ಪ್ರದೇಶಗಳನ್ನು ಕೊಟ್ಟನು ಕಾಲಗತಿಯಲ್ಲಿ ಇದೇ ಇವರ ಕೇಂದ್ರವಾಯಿತು. ಧರ್ಮಗ್ರಂಥವೆನಿಸಿದ "ಗ್ರಂಥಸಾಹೇಬ" ಎಂಬುದು ೫ ನೆಯ ಗುರುವೆನಿಸಿದ ಅರ್ಜುನನೆಂಬವನ ಕಾಲಕ್ಕೆ ತಲೆದೋರಿತು ಮುಂದೆ ಜಹಾಂಗೀರನು ಇವನನ್ನು ಕೊಲ್ಲಿಸಿದನು ಮೊಗಲರ ಒಂದೆ ತಡೆಯಲಾರದೆ ಆರನೆಯ ಗುರುವಾದ ಹರಗೋವಿಂದ ಎಂಬವನು ಶೀಖರನ್ನು ಯುದ್ಧಕ್ಕೆ ಅಣಿಮಾಡಿದನು- ಗುರುಗೋವಿಂದನೆಂಬವನು ಮುಂದೆ ''ಖಾಲ್ಸಾ" ಎಂಬ ಸೇನಾ ಸಂಸ್ಥೆಯನ್ನು ತಯಾರಿಸಿದನು. ಗುರುಗೋವಿಂದನು ಮೊಗಲರಿಂದ ಹತನಾದ ಮೇಲೆ ಶೀಖರು ಮಹಮ್ಮದೀಯರ ದ್ವೇಷಿಕರಾದರು. ಬರಬರುತ್ತ

ಇವರು ಪಂಜಾಬದಲ್ಲಿ ಸ್ವತಂತ್ರರಾಗಿ ಆಳಹತ್ತಿದರು. ಮುಂದ ರಣಜಿತ ಸಿಂಗನ ಕಾಲಕ್ಕೆ ಶೀಖರು ಒಳ್ಳೆ ಪ್ರಸಿದ್ಧಿಗೆ ಬಂದರು.

೧೭೦೬ ರಲ್ಲಿ ಔರಂಗಜೇಬನಿಗೆ ರೋಗವುಂಟಾಯಿತು. ಹೇಗಾದರೂ ಮಾಡಿ ಅಹಮುದಾಬಾದದಲ್ಲಿ ಹೋಗಿ ಬೀಡು ಬಿಟ್ಟನು. ರೋಗ ಹಿಮ್ಮೆಟ್ಟಿದಾಗ ಇವನು ದರ್ಬಾರ ಕೂಡಿಸಲು ಯತ್ನಿಸಿದನು. ಆದರ ಜ್ವರ ಹೆಚ್ಚಾಗಹತ್ತಿತು. ಆದರೆ ನಮಾಜನ್ನು ಮಾತ್ರ ಅವನು ಎಂದೂ ಬಿಡಲಿಲ್ಲ. ೧೭೦೭ ಫೇಬ್ರುವರಿ ೨೧ ನೇ ಶುಕ್ರವಾರ ದಿನ ನಮಾಜು ಮಾಡಿ ತೀರಿದನು.

ಈತನ ಮರಣದಿಂದ ಮೊಗಲರ ಅವನತಿ ಸುರುವಾಯಿತೆಂದು ಹೇಳಬಹುದು. ಈತನ ಮಕ್ಕಳು ಪಟ್ಟಕ್ಕಾಗಿ ತಮ್ಮ ತಮ್ಮೊಡನೆ ಜಗಳವಾಡಹತ್ತಿದರು. ಹೀಗೆ ಆಗುವದೆಂದು ತಿಳಿದು ಔರಂಗಜೇಬನು ಒಂದು ಮೃತ್ಯುಪತ್ರವನ್ನು ಬಿಟ್ಟುಹೋಗಿದ್ದನು. ಅದರಲ್ಲಿ, ತನ್ನ ರಾಜ್ಯವನ್ನು ಎಲ್ಲ ಮಕ್ಕಳಲ್ಲಿ ಸರಿಯಾಗಿ ಹಂಚಿದ್ದನು. ಎಲ್ಲ ಮಕ್ಕಳು ಆಗ್ರಾ ಕೋಟೆಯಲ್ಲಿರುವ ವಿಪುಲ ದ್ರವ್ಯ ಸಂಗ್ರಹವನ್ನು ವಶಪಡಿಸಿಕೊಳ್ಳಲು ತವಕಪಡಹತ್ತಿದರು. ಶಹಾ ಅಲಂ ಎಂಬ ಮಗನಿಗೆ ಈ ದ್ರವ್ಯ ಸಂಗ್ರಹವು ಸಿಕ್ಕಿತು. ಅವನು ಅದನ್ನು ತನ್ನ ಸರದಾರರಲ್ಲಿಯೂ, ಮತ್ತು ದಂಡಾಳುಗಳಲ್ಲಿಯೂ ಹಂಚಿದನು. ಇವನು ಬಹದ್ದೂರ ಶಹನೆಂಬ ಹೆಸರಿನಿಂದ ಪಟ್ಟಕ್ಕೆ ಕುಳಿತು ಉಳಿದ ಅಣ್ಣ ತಮ್ಮಂದಿರ ಕೂಡ ಯುದ್ಧ ಮಾಡಲು ಅನುವಾದನು. ಈ ಯುದ್ಧಗಳೂ ಔರಂಗಜೇಬನು ಪಟ್ಟವೇರುವ ಮೊದಲು ಮಾಡಿದ ಹೀನ ಕೃತಿಗಳೂ, ಮುಂದೆ ತನ್ನ ಅಣ್ಣ-ತಮ್ಮಂದಿರನ್ನೂ, ತಂದೆಯನ್ನೂ, ನಡಿಸಿಕೊಂಡ ರೀತಿಯೂ, ಬಲು ಹೇಯವಾದವು.

ದಿಲ್ಲಿಯ ದರಬಾರದಲ್ಲಿ, ಈ ನಂತರ ನಡೆದ ಕತೆಯು, ಮೋಸ-ಕೊಲೆ, ಸುಲಿಗೆ, ನಿರ್ದಯತನಗಳ ಕಂತೆಯಾಗಿದೆ. ಹಲವಾರು ಬಾದಶಹರು ಪಟ್ಟದ ಮೇಲೆ ಮಿಂಚಿ ಹೋದರು. ಬರಬರುತ್ತ ಮೊಗಲರ ವರ್ಚಸ್ಸು ಅಡಗಿ, ಪೇಶ್ವೆಯರ ಬೆಳಕು ಬೀಳ ಹತ್ತಿತು. ಈ ಸ್ಥಿತಿಯನ್ನು ಕಂಡು ಪರ್ಶಿಯಾದ ಅರಸನಾದ ನಾದೀರ ಶಹನು ದಂಡೆತ್ತಿ ಬಂದನು.

## ಮೊಗಲ ಕಾಲದಲ್ಲಿ ಹಿಂದೀಯರ ಪರಿಸ್ಥಿತಿ:—

ಮೊಗಲ ಮನೆತನದ ಎಲ್ಲ ಅರಸರ ರಾಜಕೀಯ ಧೋರಣೆಯ ತಳ ಹದಿಯು, ರಾಜ್ಯವಿಸ್ತಾರ ಮತ್ತು ಸುಖಕರವಾದ ಆಡಳಿತೆಯಾಗಿದ್ದವು. ಇವುಗಳನ್ನು ನಡಿಸುವದಕ್ಕೆ ಮೊಗಲ ದರ್ಬಾರವು ಬಹು ಗಟ್ಟಿಯಾಗಿತ್ತು. ಪರ್ಶಿಯಾ ಅಫಗಾಣಿಸ್ತಾನಗಳ ಸಂಗಡ ಮತ್ತು ಹಿಂದುಗಳ ಸಂಗಡ ರಾಜ್ಯಕ್ಕೆ ಬಾಧೆ ಬರದಂತೆ ನಡೆದುಕೊಳ್ಳುವದಕ್ಕೆ ಬಾದಶಹನು ತನ್ನ ಸ್ವಂತ ನೇತೃತ್ವ ದಲ್ಲಿ ಬುದ್ಧಿವಂತರಾದ ಮಂತ್ರಿಗಳ ಮುಖಾಂತರ, ಆಡಳಿತೆ ಸಾಗಿಸುತ್ತಿದ್ದನು. ಎಲ್ಲ ಆಜ್ಞೆಗಳೂ, ಆಡಳಿತೆಯ ನಿಯಮಗಳೂ, ಬಾದಶಹನ ಮುದ್ರೆಯಿಂದ ಹೊರಡುತ್ತಿದ್ದವು. ತನ್ನ ಅಂಕಿತದಲ್ಲಿಯ ರಾಜ್ಯಗಳನ್ನು ಒಂದುಗೂಡಿಸಿ, ಹಿಂದುಸ್ತಾನಕ್ಕೆ ಒಂದುತನವನ್ನು ದೊರಕಿಸಲು ಈ ಸಾಮ್ರಾಜ್ಯವು ಸಹಾಯ ಮಾಡಿತು ಇಡೀ ಹಿಂದುಸ್ತಾನದಲ್ಲಿ ಒಂದೇ ಭಾಷೆ ನಡೆಯುವಂತೆ ಮಾಡಿತು ಇದು ಫಾರ್ಶಿ ಭಾಷೆ ಈ ಭಾಷೆಯ ಕವಿಗಳಿಗೆ ಬಹಳ ಆಶ್ರಯ ಸಿಕ್ಕಿತು. ಆಡಳಿತೆಯ ಎಲ್ಲ ಅಧಿಕಾರದ ಸ್ಥಳಗಳು ಫಾರ್ಶಿ ಜನ ರಿಗೇ ಹೋಗುತ್ತಿದ್ದವು ಅವರ ಸಲುವಾಗಿ ಪಕ್ಷಪಾತವಿತ್ತೆಂದರೂ ಅಡ್ಡಿ ಇಲ್ಲ. ಫಾರ್ಶಿ ಭಾಷೆಯನ್ನು ಆಳವಾಗಿ ಅಭ್ಯಾಸ ಮಾಡಿ ಅದ್ವಿತೀಯ ಪಂಡಿ ತರಾದ ಹಿಂದುಗಳಿದ್ದರು , ಸಂಸ್ಕೃತವನ್ನು ಮನಗೊಟ್ಟು ಓದಿದ ಫಾರ್ಶಿ ಜನರೂ ಇದ್ದರು.

ಮೊಗಲ ಅರಸರು ಹಿಂದುಸ್ತಾನಕ್ಕೆ ದಂಡೆತ್ತಿ ಬಂದು ಅದನ್ನು ಕ್ರಮ ವಾಗಿ ಗೆದ್ದು, ತಾವು ಆಳರಸರಾಗಿ ಇಲ್ಲಿಯೇ ನಲಿಸಿದರು. ಇಲ್ಲಿ ಎಲ್ಲ ಜಾತಿ, ಮತ ಪಂಥಗಳ ಸಂಗಡ ಒಳಗೂಡಿ ನಡೆದರು ಆದ್ದರಿಂದ ಮೊಗಲರ ಆಳಿ ಕೆ "ಹಿಂದೀ ಸಾಮ್ರಾಜ್ಯಕ್ಕೆ" ಪ್ರೋಷಕವೆನಿಸಿತೇ ವಿನಾ ವಿಘಾತುಕ ವಾಗಲಿಲ್ಲ. ಪಾರ್ಶಿಗಳಿಗೆ ನೌಕರಿ ಹೆಚ್ಚು ಸಿಗುತ್ತಿದ್ದರೂ, ಹಿಂದುಗಳು-ರಜಪೂತರು-ಬ್ರಾಹ್ಮಣರು-ಹೊಣೆಗಾರ ಚಾಕರಿಯನ್ನು ಮಾಡಿದರು. ದಿನ ದಿನದ ಆಡಳಿತೆಯಲ್ಲಿಯೂ ಹಿಂದೂ ಮುಸಲ್ಮಾನರೆಂಬ ಪಕ್ಷಪಾತವಿದ್ದಿಲ್ಲ. ದಾನ, ಧರ್ಮಗಳೂ, ತಿಂಡಿ ತಿನಸುಗಳೂ ಭೋಜನ ಮೇಜವಾನಿಗಳೂ ಹಿಂದೂ ಮುಸಲ್ಮಾನರಿಗೆ ಸಮಾನನಾಗಿ ಸಲ್ಲುತ್ತಿದ್ದವು. ಮಶೀದೆಗಳನ್ನು

ಕಟ್ಟಿಸಲಿಕ್ಕೆ ಆಸ್ಪದಕೊಟ್ಟಂತ ಮಂದಿರಗಳನ್ನು ಕಟ್ಟಲಿಕ್ಕೂ ಅನುವು ಕೊಡುತ್ತಿದ್ದರು.

ಹಿಂದುಸ್ಥಾನದ ವ್ಯಾಪಾರ ಸಂಭಂಧಗಳು ಪುರಾತನ ಕಾಲದಿಂದ ನಡೆದು ಬಂದಿದ್ದರೂ ಮೊಗಲರ ಕಾಲದಲ್ಲಿ ಇದಕ್ಕೆ ಹೊಸ ಪುಷ್ಟಿ ಸಿಕ್ಕು ಇಂದು ಕಾಣುವ ಬೆಳವಣಿಗೆ ಸಾಧ್ಯವಾಯಿತು. ಮೊಗಲ ಕಾಲದಲ್ಲಿ ಪರ್ಶಿಯಾ, ಬಸರಾ, ಮೊಂಬಾಸಾ, ಸುಮಾತ್ರಾಗಳಿಗೆ ಕಡಲ ಪಯಣ ಬೆಳೆದು ವ್ಯಾಪಾರವು ನಡೆಯುತ್ತಿತ್ತು.

ಒಳನಾಡು ವ್ಯಾಪಾರ ಈಗಿದ್ದಂತೆಯೇ ಮೊಗಲರ ಕಾಲದಲ್ಲಿಯೂ ಇತ್ತು ರೆಲ್ವೆ ಇಲ್ಲದಲ್ಲಿ, ಮೊಗಲರ ಕಾಲದ ವಾಹನಗಳೂ, ಮಾರ್ಗಗಳೂ ಇನ್ನೂ ಕಾಣುತ್ತವೆ. ಉದಾ—ಮಚ್ಛಿವೆ, ಪ್ರಾಣೆಗಳು, ಗುಡ್ಡದ ದಾರಿಗಳು ಇತ್ಯಾದಿ. ನಮ್ಮ ಹಿರಿಯ ಉದ್ಯೋಗವಾದ ಒಕ್ಕಲತನವು ಇನ್ನೂ ಮೊಗಲರ ಕಾಲದಲ್ಲಿ ಇದ್ದಂತೆಯೇ ಇದೆ. 'ಹುಂಡಿ' 'ಸಾಹುಕಾರ ಮುಂತಾದವುಗಳು ಇನ್ನೂ ನಡೆದಿವೆ. ಅಳತೆ ತೂಕಗಳು ಮಾರ್ಪಾಟು ಹೊಂದಿದರೂ, ಈಗಿನ ಅಳತ ತೂಕಗಳಿಗೆ ತಳಹದಿಯಾಗಿವೆ ಈಗಿನ ನಾಣ್ಯಗಳು ಆಗಿನವುಗಳನ್ನು ಹೋಲುತ್ತವೆ ಬ್ರಿಟಿಶರ ವ್ಯಾಪಾರ ಬೆಳವಣಿಗೆಯು ಈ ದೇಶದಲ್ಲಿ ಮೊಗಲರ ಕಾಲದ ವ್ಯಾಪಾರ, ಉದ್ಯೋಗ ಸಂಘಗಳನ್ನು ಎದುರಿಸಬೇಕಾಯಿತು

ಕಾಶ್ಮೀರದ ಜಮಖಾನೆಗಳು, ಡಾಕ್ಕಾದ 'ಮಲ್ಲ' ಎಂಬ ಅರಿವೆಯು ಬಹು ಪ್ರಸಿದ್ಧವಾಗಿದ್ದವು.

ಈ ಕಾಲದಲ್ಲಿ ಇಂಗ್ಲಂಡಕ್ಕೆ ಹಿಂದುಸ್ತಾನದಿಂದ ಅರಿವೆಯು ರಫ್ತ ಆಗುತ್ತಿತ್ತು.

ಮೊಗಲ ರಾಜರು ಆಳಿಹೋಗಿ ಬಹುದಿನಗಳಾದವು. ಆದರೂ ಅವರ ಕಾಲದ ನೆನಪು ಹೆಜ್ಜೆ ಹೆಜ್ಜೆಗೂ ಹಲವಾರು ಕಾರಣಗಳಿಂದ ಆಗುತ್ತದೆ. ಅದೇಕೆ ! ಆ ಜೀವನವನ್ನೇ ನಾವು ಹೆಜ್ಜೆ ಹೆಜ್ಜೆಗೂ ಅನುಸರಿಸುತ್ತೇವೆ- ಪೋಷಾಕು, ಮಾತು, ನಡತೆಗಳು, ವಿಚಾರಗಳು, ವಾಙ್ಮಯ, ಗಾಯನ ಕಲೆ,

ಚಿತ್ರಕಲೆ, ಶಿಲ್ಪಕಲೆಗಳಲ್ಲಿ ಮೊಗಲರ ಸ್ವರೂಪವೇ ದಿನದಿನವೂ ಕಂಡು ಬರುತ್ತದೆ ಇದೆಲ್ಲ ಹಿಂದು ಮುಸಲ್ಮಾನರ ಮಿಶ್ರದ ಪರಿಣಾಮ, ಅಥವಾ ದ್ಯೋತಕವಾಗಿದೆ ಉತ್ತರದಲ್ಲಿಯ ಗಂಭೀರ ರೀತಿ, ಪೋಷಾಕಿನ ವಿವಿಧತೆ, ನಟನೆ ಇವೆಲ್ಲ ಮೊಗಲ ದರಬಾರದಲ್ಲಿ ಕೆಲಸ ಮಾಡುವವರದು ದಿನದಿನದ ಜನಜೀವನದಲ್ಲಿ ಹಿಂದು ಮುಸಲ್ಮಾನರು ಕೂಡಿ ನಡೆದರು

ಇವೆರಡು ವಿರೋಧಿಯಾದ ಧರ್ಮಗಳು ಕೂಡುವವೆಂಬುದೆ ಎಂತಹ ಮಾತೋ ಎನಿಸಿತ್ತು ಆದರೆ, ದಿನದಿನಕ್ಕೆ ಇವೆರಡು ಮತಗಳು ಜೊತಜೊತೆಗೆ ನಡೆದಿರಲು, ಎಷ್ಟೋ ಕಡೆಗೆ ಹೊಂದಿಕೊಂಡವು ಈ ಹೊಂದಿಕೆಯನ್ನು ದೃಢಪಡಿಸಲು ಅಕಬರ, ನಾನಕ, ಕಬೀರ, ದಾರಾ ಸಿಕೋ, ಅಮೀರ ಖುಸ್ರು ಮುಂತಾದವರು ಯತ್ನಿಸಿದರು ನಾನಕ, ಕಬೀರ ಮುಂತಾದವರು ಧಾರ್ಮಿಕ ರೀತಿಯಿಂದಲೂ ಅಕಬರನಂತಹರು ರಾಜಕೀಯವಾಗಿಯೂ ಐಕ್ಯ ಸಾಧಿಸಲು ಹೆಣಗಿದರು

### ಪ್ರಶ್ನಾವಲಿ:—

(೧) ಮೊಗಲ ಅರಸರಲ್ಲಿ ಅಕಬರನು ಬಹು ಮಿಗಿಲಾದವನೆಂಬುದನ್ನು ಸಕಾರಣ ವಿವರಿಸಿರಿ.

(೨) ಶಹಾಜಹಾನನ ಕಾಲವು ಮೊಗಲ ಆಳಿಕೆಯ ಶಿಖರ. ವಿವರಿಸಿರಿ.

(೩) ಔರಂಗಜೇಬನು ಮೊಗಲ ರಾಜ್ಯದ ಮೂಲಕ್ಕೆ ಕೊಡಲಿಯನ್ನಿಟ್ಟವನು. ಹೇಗೆಂಬುದನ್ನು ವಿವರಿಸಿರಿ.

(೪) ಮೊಗಲರ ಕಾಲದಲ್ಲಿ ಸಾಮಾನ್ಯ ಮನುಷ್ಯನ ದಿನಚರಿಯನ್ನು ವಿವರಿಸಿರಿ.

# ೧೭. ಮರಾಠರ ಆಳಿಕೆ.

**ಹಿಂದುತ್ವದ ಧ್ಯೇಯವುಳ್ಳ ಡೊರೆತನವು:—**

೧೭ನೆಯ ಶತಮಾನದ ಕೊನೆಯಸ್ಟೊತ್ತಿಗೆ ಇಡೀ ಉತ್ತರ ಭಾರತವೆಲ್ಲ ಮೊಗಲ ಬಾದಶಹರ ವಶವಾಗಿದ್ದಿತೆಂದು ನಾವು ಕಲಿತವು. ಆದರ ದಕ್ಷಿಣದಲ್ಲಿ ಮಾತ್ರ ಮಹಮ್ಮದೀಯ ಅರಸರಿಗೂ, ಇಸ್ಲಾಂ ಮತದ ಪ್ರಸಾರಕ್ಕೂ ಇಲ್ಲಿಯ ಹಿಂದೂ ಜನತೆ ಮತ್ತು ರಾಜ್ಯಗಳು ಆತಂಕಗಳೆನ್ನಿಸುತ್ತಲೇ ಇದ್ದವು. ಈಗ ಮಹಾರಾಷ್ಟ್ರವೆಂದು ಕರೆಯುವ ಪ್ರದೇಶದಲ್ಲಿ ೧೩ನೆಯ ಶತಕದಿಂದ ೧೭ನೆಯ ಶತಕದ ವರೆಗೆ ಆಗಿ ಹೋದ ಜ್ಞಾನೇಶ್ವರ, ಏಕನಾಥ, ನಾಮದೇವ, ತುಕಾರಾಮ, ರಾಮದಾಸ ಮುಂತಾದ ಸಾಧುವರ್ಗವು ಮಾಡಿದ ಹಿಂದೂ ಧರ್ಮಬೋಧೆಯಿಂದ, ವೈದಿಕ ಧರ್ಮದಲ್ಲಿ ಜನರ ಶ್ರದ್ಧೆ ಹೆಚ್ಚಿ, ಪರಧರ್ಮೀಯರೂ ಪರದೇಶದವರೂ ಆದ ಮುಸಲ್ಮಾನರನ್ನು ಮುಂದಕ್ಕೆ ಬರಗೊಡಬಾರದೆಂಬ ಮಹದಾಶೆಯು ಪ್ರತಿಯೊಬ್ಬನ ಹೃದಯದಲ್ಲಿಯೂ ಉಕ್ಕಿಬಂದಿತು. ಸ್ವಾತಂತ್ರ್ಯಪ್ರೇಮವಂತೂ ಅಚ್ಚಳಿಯದ ಉದಿತು. ಈ ರೀತಿ ನಾಯಕನೆನಿಸಿ, ಗೋಬ್ರಾಹ್ಮಣಪ್ರತಿಪಾಲಕನಾಗಿ, ಹಿಂದೂ ರಾಜ್ಯ ಸಂಸ್ಥಾಪನೆ ಮಾಡಲೆಳಸುವ ಒಬ್ಬ ವಿಭೂತಿಯ ನಿರೀಕ್ಷಣೆಯು ಜನರಲ್ಲಿ ಸ್ಪಷ್ಟವಾಗಿ ಕಂಡುಬಂದಿತು. ಹೀಗೆ ಕ್ರಿ.ಶ. ೧೭ನೆಯ ಶತಕದ ಮಧ್ಯಕಾಲಕ್ಕೆ ರಾಜಕೀಯ, ಧಾರ್ಮಿಕ ತೊಡಕುಗಳನ್ನು ಹೇಗೆ ಬಿಡಿಸಬೇಕೆಂಬ ಯೋಚನೆಯು ಪ್ರತಿಯೊಬ್ಬ ಹಿಂದುವಿನ ಮನಸ್ಸಿನಲ್ಲಿಯೂ ಮೂಡಿದ್ದಿತು. ಈ ಮೊದಲೆ ಮೇಲು ಪಂಕ್ತಿಯನ್ನು ಹಾಕಿಕೊಟ್ಟ ಹೊಯ್ಸಳ, ವಿಜಯನಗರ ರಾಜರುಗಳ ಉದಾಹರಣೆಯಂತೂ ಕಣ್ಣಿಗೆ ಕಟ್ಟಿದಂತಿದ್ದವು. ಈಗ ನಾಯಕತ್ವವನ್ನು ವಹಿಸಿದವನೇ ಶಿವಾಜಿಯು — ಹಿಂದೂ ರಾಜ್ಯ ಸಂಸ್ಥಾಪಕನು.

**ಶಿವಾಜಿಯ ಜನ್ಮ, ಬಾಲ್ಯ, ಶಿಕ್ಷಣ —**

ಉಜ್ವಲ ಮರಾಠಾ ಇತಿಹಾಸದ ಮೂಲ ಪುರುಷನಾದ ಶ್ರೀ ಶಿವಾಜಿಯು ಶಿವನೇರಿದುರ್ಗದಲ್ಲಿ ಕ್ರಿ. ಶ. ೧೬೨೭ ರಲ್ಲಿ ಜನಿಸಿದನು. ತಂದೆ

ಯಾದ ಶಹಾಜಿಯ ಸ್ಥಿತಿಯು ಕಂಟಕಮಯವಾದ್ದರಿಂದ ಚಿಕ್ಕಂದಿನಲ್ಲಿ ಪುಣೆ ಪಟ್ಟಣವನ್ನಾಶ್ರಯಿಸಿದನು. ಆಗ ಪುಣೆಯ ಸುತ್ತಲಿದ್ದ ಗುಡ್ಡಬೆಟ್ಟಗಳು ಇವನಿಗೆ ಕಷ್ಟಸಹನೆಯನ್ನು ಕಲಿಸಿ, ಮುಂಬರುವ ಸಾಹಸ ಜೀವನಕ್ಕೆ ಇವನನ್ನು ಅಣಿಗೊಳಿಸಿದವು. ತಾಯಿಯಾದ ಜಿಜಾಬಾಯಿಗೆ ಇವನ ಏಳಿಗೆಯೊಂದೆ ಗುರಿಯಾಗಿದ್ದರಿಂದ ಈ ಹೊಣೆಯನ್ನು ಅವಳು ಒಳ್ಳೇ ಜಾಗರೂಕತೆಯಿಂದ ನಿರ್ವಹಿಸಿದಳು. ಆಕೆಯೆ ಅವನಿಗೆ ತಂದೆ, ಗುರು, ದೈವ, ಎಲ್ಲವೂ ಅವಳೇ ಆದಳು ಜೊತೆಗೆ ದಾದಾಜಿ ಕೊಂಡದೇವನೆಂಬ ದಕ್ಷನಾದ ಗುರುವಿನಿಂದ ಉತ್ತಮ ಶಿಕ್ಷಣವು ಇವನಿಗೆ ದೊರಕಿತು ಆಗ ಶಿವಾಜಿಯು ಜನರ ಸ್ವಭಾವ ಪರೀಕ್ಷೆ, ರಾಜ್ಯದಾಡಳಿತಯ ಸಮಸ್ಯೆಗಳು, ಆಕ್ರಮ ಕ್ರಮಗಳನ್ನು ಅಳವಡಿಸಿಕೊಂಡನು. ಈ ರೀತಿ ಭವಾನಿಯ ಭಕ್ತನಾಗಿ, ತಾಯಿಯ ಪ್ರೇಮ ಪುತ್ಥಳಿಯಾಗಿ, ಒಡನಾಡಿಗರ ಮುಖಂಡನಾಗಿ ಶಿವಾಜಿಯು ಬಳೆದು ದೊಡ್ಡವನಾದನು.

ಈ ಕಾಲದಲ್ಲಿ, ಯುವಕ ಶಿವಾಜಿಯ ಮನಸ್ಸಿನಲ್ಲಿ ಸಾಹಸದ ಸಪಿಗನಸುಗಳು ಸುಳಿದವು. ಕೇವಲ ಎರಡು ವರ್ಷಗಳ ಕಾಲದಲ್ಲಿ ತೋರಣ, ಕೊಂಡಾಣೆ ಮುಂತಾದ ಅನೇಕ ಸಣ್ಣ ಸಣ್ಣ ಕೋಟೆಗಳನ್ನು ವಶಪಡಿಸಿಕೊಂಡನು. ಈ ಜಯಗಳಿಂದ ಇಡೀ ಮಹಾರಾಷ್ಟ್ರದಲ್ಲೆಲ್ಲ ಶಿವಾಜಿಯ ಕೀರ್ತಿ ಪರಿಮಳವು ಹರಡಿತು. ಈ ವೇಳೆಗೆ ಬಿಜಾಪುರದ ವತಿಯಿಂದ ಅಫಝುಲ್‌ಖಾನನೆಂಬ ಸರದಾರನು ಇವನ ಮೈಮೇಲೆ ಏರಿ ಬಂದು ಮರಣ ಹೊಂದಿದನು. ಇದರಿಂದ ದಕ್ಷಿಣದಲ್ಲಿಯು ಇವನ ಪ್ರಾಬಲ್ಯವು ಎಲ್ಲರ ಅರಿವಿಗೂ ಬಂದಿತು. ಇದರಿಂದ ಕುಪಿತನಾದ ಔರಂಗಜೇಬ ಬಾದಶಹನು ಶಾಹಿಸ್ತೆಖಾನನೆಂಬ ಸರದಾರನನ್ನು ಶಿವಾಜಿಯ ಮೇಲೆ ಕಳುಹಿದನು. ಪುಣೆಯಲ್ಲಿ ಬೀಡು ಬಿಟ್ಟಾಗ ಮಧ್ಯರಾತ್ರಿಯಲ್ಲಿ ಖಾನನ ಬಿಡಾರಕ್ಕೆ ಶಿವಾಜಿಯು ನುಗ್ಗಿದನು. ಗಾಬರಿಯಾದ ಖಾನನು ತಲೆತಪ್ಪಿಸಿಕೊಂಡು ಓಡಿಹೋಗಬೇಕಾದರೆ ಸಾಕು ಬೇಕಾಗಿ ಹೋಯಿತು. ಇದೇವೇಳೆಗೆ ಶಿವಾಜಿಯು ಸುರತ ಪಟ್ಟಣವನ್ನು ಸುಲಿದದ್ದಲ್ಲದೆ ಮಕ್ಕಾ ಯಾತ್ರಿಕರ ನೌಕೆಗಳನ್ನು ಸುಲಿದದ್ದಾಯಿತು. ಮೊದಲು ಇವನನ್ನು "ಬೆಟ್ಟದ ಇಲಿ" ಎಂದು ಕರೆದ ಔರಂಗಜೇಬನು, ಇವನನ್ನು ಉಪಾಯದಿಂದ ದಿಲ್ಲಿಗೆ ಬರಮಾಡಿಕೊಂಡು, ಸೆರೆಯಲ್ಲಿಟ್ಟನು. ಮಿರಾಯಿ

ಮಾರುವ ಬುಟ್ಟಿಗಳಲ್ಲಿ ಕುಳಿತು ಶಿವಾಜಿಯು ಈ ಬಲೆಯಿಂದ ಪಾರಾದನು. ಈ ರೀತಿ ಸೋಲನ್ನೊಪ್ಪಿಕೊಂಡ ಔರಂಗಜೇಬನು ಇವನಿಗೆ ರಾಜಾ ಎಂಬ ಬಿರುದನ್ನು ಕೊಟ್ಟನು ಇತ್ತ ಬಿಜಾಪುರ, ಗೋವಳಕೊಂಡಗಳ ಅರಸರು ಪೊಗದಿಯನ್ನೊಪ್ಪಿಸಿದರು ಮುಂದೆ ೧೬೭೪ ರಲ್ಲಿ ಶಿವಾಜಿಯು ಪಟ್ಟಾಭಿಷಿಕ್ತನಾಗಿ ಗೋಬ್ರಾಹ್ಮಣ ಪ್ರತಿಪಾಲಕ ಹಿಂದೂಧರ್ಮ ಸಂಸ್ಥಾಪಕನೆಂಬ ಬಿರುದುಗಳನ್ನು ಧರಿಸಿದನು. ನಂತರ ಶಿವಾಜಿಯು ದಕ್ಷಿಣದ ದಂಡಯಾತ್ರೆಯನ್ನು ಕೈಕೊಂಡನು ತಂಜಾವೂರಿಗೆ ತಲುಪಿ, ವೆಲ್ಲೂರು ಮತ್ತು ಜಿಂಜಿಗಳನ್ನು ಕೈವಶ ಮಾಡಿಕೊಂಡನು ನಂತರ ಕೆಲವೇ ವರ್ಷಗಳಲ್ಲಿ ಶಿವಾಜಿಯು ಕಾಲವಾದನು

ಶಿವಾಜಿಯ ಬಾಳು ಪರಿಶುದ್ಧವಾದದ್ದು. ಅನ್ಯಸ್ತ್ರೀಯಲ್ಲಿ ಇವನಿಗೆ ಪೂಜ್ಯ ಭಾವನೆಯಿದ್ದಿತು ಪುರಾಣಗಳಲ್ಲಿ ಹೇಳಿದ ಕ್ಷತ್ರಿಯ ಅರಸರನ್ನು ಇವನು ಅನುಕರಿಸಲು ಯತ್ನಿಸುತ್ತಿದ್ದನು ಸಾಧುಸಂತರಲ್ಲಿ ಇವನಿಗೆ ಭಕ್ತಿ ಬಹಳ. ' ಶ್ರೀ ರಾಮದಾಸ ಸಾಧುಗಳು ಇವನ ಗುರುವಾಗಿದ್ದರು ಇವನಿಗೆ ಪರಮತ ಸಹಾನುಭೂತಿಯೂ ಹೆಚ್ಚಾಗಿತ್ತು ಖಾಜಿ ಹೈದರನು ಇವನ ಖಾಸಗಿ ಕಾರಭಾರಿಯಾಗಿದ್ದನು. ಇನ್ನೂ ಎಷ್ಟೋ ಮಹಮ್ಮದೀಯರು ಇವನಲ್ಲಿ ಚಾಕರಿಗೆ ಇದ್ದರು.

**ಆಡಳಿತೆ :—**

ದೇಶದ ಆಡಳಿತೆಯನ್ನು ರಾಜನಾದ ಶಿವಾಜಿಯು ಸ್ವತಃ ನೋಡಿಕೊಂಡನು ಅರಸನಿಗೆ ಸಹಾಯ ಮಾಡಲು ಎಂಟು ಮಂದಿ ಮಂತ್ರಿಗಳದೊಂದು ಮಂಡಲವಿದ್ದಿತು. ಇದಕ್ಕೆ ಅಷ್ಟ ಪ್ರಧಾನ ಮಂಡಲವೆಂಬ ಹೆಸರಿದ್ದಿತು ಇವರಲ್ಲಿಯ ಮುಖ್ಯ ಪ್ರಧಾನನಿಗೆ ಪೇಶ್ವೇ ಎಂದು ಕರೆವರು. ಒಬ್ಬೊಬ್ಬ ಮಂತ್ರಿಯು ಒಂದೊಂದು ಖಾತೆಯನ್ನು ನಡಿಸಿದನು. ಆಗಿನ ತೀರ್ಮಾನಗಳೆಲ್ಲ ಹಿಂದೂ ಧರ್ಮಶಾಸ್ತ್ರನಿಯಮಗಳಿಗನುಸರಿಸಿದ್ದರಿಂದ ಈ ಮಂತ್ರಿ ಮಂಡಲದಲ್ಲಿ ವೇದ ಶಾಸ್ತ್ರ ಪಾರಂಗತನಾದ ಶಾಸ್ತ್ರಿ ಇರುತ್ತಿದ್ದನು. ಪ್ರಸಂಗ ಬಂದಲ್ಲಿ, ಎಲ್ಲ ಮಂತ್ರಿಗಳೂ ದಂಡಯಾತ್ರೆ ಕೈಕೊಳ್ಳಬೇಕಿತ್ತು. ಆಗ ಮಂತ್ರಿಗಳ ಪ್ರತಿನಿಧಿಗಳು ಕೆಲಸ ನೋಡಿಕೊಂಡರು. ರಾಜ್ಯವು ಜಿಲ್ಹೆಗಳಲ್ಲಿ

ವಿಭಾಗವಾಗಿದ್ದಿತು. ಜಿಲ್ಹೆಯ ಅಧಿಕಾರಿಗೆ ಸಹಾಯ ಮಾಡಲು ೮ ಜನರು ಇದ್ದರು. ಇವರಲ್ಲಿ ಲೆಕ್ಕಪತ್ರ ಪತ್ರವ್ಯವಹಾರ ಮುಂತಾದ ರಾಶಿಗಳು ಹಂಚಿಕೆಯಾದವು.

**ಸೈನ್ಯಖಾತೆ :—** ಮೊದಮೊದಲು ಶಿವಾಜಿಯ ದಂಡಿನಲ್ಲಿ ಬರೀ ಕಾಲಾಳುಗಳೇ ಇದ್ದರು. ಬೇರೆ ರಾಜರ ಸೈನ್ಯದ ಸಂಪರ್ಕ ಬಂದಂತೆ, ಇದನ್ನು ಬದಲಿಸಿ, ಸ್ವಾರರೂ ಸೇರ್ಪಡೆಯಾದರು. ಸೇನಾಧಿಕಾರಿಗಳ ಒಂದು ಶ್ರೇಣಿ ಇದ್ದಿತು. ಇದರ ಕೆಳತುದಿಗೆ ನಾಯಕನೂ ತೀರ ಮೇಲ್ತುಟ್ಟಕ್ಕೆ ಸೇನಾಧಿಪತಿ (ಸರನೌಬತ) ಯೂ ಇದ್ದರು. ಸ್ವಾರರ ಪಡೆಯು ಪ್ರಾರಂಭವಾದಂದಿನಿಂದ ಅದಕ್ಕೊಬ್ಬ ಬೇರೆ ಅಧಿಕಾರಿ ನೇಮಿತನಾದನು. ಸ್ವಾರರಲ್ಲಿ ಬಾರಗೀರರಂತಲೂ ಶಿಲೇದಾರರೆಂತಲೂ ಎರಡು ಭಾಗಗಳಾಗಿದ್ದವು. ಸೈನಿಕರಿಗೂ ಅಧಿಕಾರಿಗಳಿಗೂ ಸಂಬಳಗಳು ಸಲ್ಲಿದವು. ಪ್ರತಿದಿನವೂ ಸೈನಿಕರಿಗೆ ಕವಾಯಿತು ಮುಂತಾದವುಗಳು ಇದ್ದಿಲ್ಲವೆಂದು ಕಾಣುತ್ತದೆ. ಮಳೆಗಾಲದಲ್ಲಿ ಸೈನಿಕರು ಶಿಬಿರದಲ್ಲಿ ವಿಶ್ರಾಂತಿ ಪಡೆದರು. ಹಿಂದೂ ಪದ್ಧತಿಯಂತೆ ವಿಜಯ ದಶಮಿಯ ದಿನ ಆಯುಧ ಪೂಜೆ ಮಾಡಿ ಯುದ್ಧಕ್ಕೆ ಅಣಿಯಾಗುತ್ತಿದ್ದರು. ಯುದ್ಧರಂಗವು ಬೇಸಿಗೆ ಮುಗಿಯುವವರೆಗೆ ನಡೆಯುತ್ತಿದ್ದಿತು.

**ಹಡಗುಪಡೆ :—** ಶಿವಾಜಿಯು ಮೆಕ್ಕಾಯಾತ್ರೆಗೆ ಹೊರಟ ಕೆಲವು ನೌಕೆಗಳನ್ನು ಸುಲಿದನೆಂದು ಹೇಳಿ ಹೇಳಿದೆಯಷ್ಟೇ! ಈ ಸಾಹಸದಿಂದಲೇ ನೌಕಾಪಡೆಯು ಪ್ರಾರಂಭವಾಯಿತೆನ್ನಬಹುದು.

ಪಶ್ಚಿಮ ಕರಾವಳಿಯಲ್ಲಿ ಈಗಿನ ಮುಂಬಯಿಯ ಸಮೀಪದಲ್ಲಿ ಆಗಿನ ಕಾಲಕ್ಕೆ ದಂಡರಾಜಪುರಿ, ಮತ್ತು ಜಂಜಿರಾ ಇವು ಸುಗಿಲಾದ ಬಂದರುಗಳೆಂದು ಹೆಸರು ಪಡೆದಿದ್ದವು. ಇವುಗಳನ್ನು ಕ್ರಿ. ಶ. ೧೪೯೦ ರಲ್ಲಿ ಅಹಮ್ಮದ ನಿಜಾಮ ಉಲ್-ಮುಲ್ಕ ಎಂಬ ನಿಜಾಮ ಶಾಹಿಯ ಸಂಸ್ಥಾಪಕನು ಗೆದ್ದುಕೊಂಡನು. ಮತ್ತು ಅಲ್ಲಿಯ ವ್ಯವಸ್ಥೆ ನೋಡಲಿಕ್ಕೆ ಯಾಕೂಬಖಾನ ಸಿದ್ದಿ ಎಂಬವನನ್ನು ನೇಮಿಸಿದನು. ಅಂದಿನಿಂದ ಹಬಸಿ ಸರದಾರನಾದ ಯಾಕೂತಖಾನನು ಇಲ್ಲಿ ಒಂದು ಹಡಗು ಪಡೆಯನ್ನು ನೆಲಿಸಲು ಪ್ರಯತ್ನಿಸಿದ್ದು ಕಂಡು ಬರುತ್ತದೆ. ಮಕ್ಕಾ ಯಾತ್ರಿಕ ಸಾಗಿಗೆ, ಪರದೇಶ ವ್ಯಾಪಾರದ ಮೇಲ್ವಿಚಾರಣೆಗಳು ಇವರ ಮೊದಮೊದಲಿನ ಕೆಲಸಗಳಾಗಿದ್ದವು. ಮುಂದೆ ೧೬೭೧ ರಲ್ಲಿ ಸಿದ್ದಿ ಅಂಬರ

ಎಂಬವನು ಈ ರಾಣೆಯ ಮುಖ್ಯಸ್ಥನೆಂದು ನೇಮಕನಾದನು ಕೊನೆಗೆ ಶಿವಾಜಿಯ ಕಾಲಕ್ಕೆ ಫತ್ತೇಖಾನ ಸಿದ್ದಿ ಎಂಬವನು ಮುಖ್ಯಸ್ಥನಾಗಿದ್ದನು ಇವನು ಮರಾಠರಿಗೆ ವೈರಿಯಾಗಿದ್ದನು

ಗಡಿನಾಡಿನ ಸಂರಕ್ಷಣೆಯು ರಾಜನ ಪ್ರಧಾನ ಕರ್ತವ್ಯವೆನಿಸಿದ್ದರಿಂದ. ಶಿವಾಜಿಯು ಪಶ್ಚಿಮ ಕರಾವಳಿಯಲ್ಲಿ ಕಾರವಾರದಿಂದ ಸೂರತ ಬಂದರದ ವರೆಗೆ ಕರಾವಳಿಯ ರಕ್ಷಣೆಯನ್ನು ಮಾಡಲು ಹಣಿಗಿದನು, ಆದ್ದರಿಂದ ರಾಜಾಪುರದಲ್ಲಿ ನೆಲೆಸಿದ್ದ ಸಿದ್ದಿಯನ್ನು ಜಯಿಸದ ಹೊರತು ಮಾರ್ಗವು ಇಲ್ಲ ಇದಕ್ಕಾಗಿ ಶಿವಾಜಿಯ ಹಡಗುಪಡೆಯು ಮೂಡಲು ಪ್ರೇರಿತವಾಯಿತು. ಒನ್ನು ಸಿದ್ದಿಯ ಮೇಲೆ ಏರಿ ಹೋದದ್ದಾಯಿತು ಆದರೆ ಅಯಶಸ್ವಿಯಾಗಲು, ಮತ್ತೊಂದು ಸಲ ಪ್ರಯತ್ನಿಸಿ, ಸಿದ್ದಿಯಿಂದ ದಂಡರಾಜಪುರಿಯನ್ನು ಗೆದ್ದು ಕೊಂಡದ್ದಾಯಿತು ಈ ಸಂದರ್ಭಗಳಲ್ಲಿ ನೌಕಾಬಲದ ಮಹತ್ವವನ್ನು ಕಂಡುಹಿಡಿದು ೫೦೦ ಹೊಸ ಹಡಗುಗಳನ್ನು ನಿರ್ಮಿಸಿ, ಅವುಗಳನ್ನು ಕುಲಾಬಾ ಎಂಬಲ್ಲಿ ಕೇಂದ್ರೀಕರಿಸಿ ಇಟ್ಟಿದ್ದಾಯಿತು. ಅಲ್ಲದೆ, ಸುವರ್ಣ-ದುರ್ಗ, ಮತ್ತು ವಿಜಯದುರ್ಗ ಎಂಬಲ್ಲಿಯೂ ನೌಕೆಗಳನ್ನು ಇಟ್ಟನು. ಈ ಪಡೆಯಲ್ಲ ಖಲಾಸಿ, ತೋಫು ಮುಂತಾದವುಗಳು ಸಜ್ಜಾದವು ಇದರಿಂದ ಪೋರ್ತುಗೀಜರಿಗೂ, ಇಂಗ್ಲಿಷರಿಗೂ ಶಿವಾಜಿಯ ಭೀತಿಯು ಹುಟ್ಟಿತು. ಮುಂದೆ ಔರಂಗಜೇಬನ ಪತಿಯಿಂದ ಜಯಸಿಂಹನು ಶಿವಾಜಿಯ ಮೇಲೆ ಏರಿಬಂದಾಗ, ಸಿದ್ದಿಯೂ ಮೊಗಲಬಾದಶಹನ ಪತಿಯಿಂದ ಶಿವಾಜಿಯನ್ನು ಎದುರಿಸುವಂತೆ ಜಯಸಿಂಹನು ಮಾಡಿದನು. ಮಕ್ಕಾ ಯಾತ್ರಿಕರ ಸಾಗಣೆಯನ್ನು ಮಾಡಲು ಸಿದ್ದಿಯು ಸಿದ್ಧನಾದ್ದರಿಂದ, ಅವನು ಈ ಕಾಲಕ್ಕ ಮೊಗಲರ ಹಡಗುಪಡೆಯ ಅಧಿಕಾರಿಯೆನಿಸಿದನು ಕ್ರಿ.ಶ. ೧೬೭೯ ರಲ್ಲಿ ಶಿವಾಜಿಯು ಸಿದ್ದಿಯ ಮೇಲೆ ಮತ್ತೊಮ್ಮೆ ಏರಿಹೋಗಿ ಅವನಿಂದ ಜಂಜಿರವನ್ನು ಮತ್ತೊಮ್ಮೆ ಕಿತ್ತುಕೊಂಡನು ಕಾಲಗತಿಯಲ್ಲಿ ಔರಂಗಜೇಬನಿಂದ ಮುಜೋಳ ಎಂಬ ಬಂದರನ್ನು ಶಿವಾಜಿಯು ಕಿತ್ತುಕೊಂಡನು

ಪಶ್ಚಿಮ ಕರಾವಳಿಯಲ್ಲಿ ಎಷ್ಟೋ ಬಂದರಗಳನ್ನು ತನ್ನ ಆಧೀನದಲ್ಲಿ ಇಟ್ಟುಕೊಂಡು ಶಿವಾಜಿಯು ತನ್ನ ರಾಜ್ಯ ಬೆಳೆಸಲು ಪ್ರಯತ್ನಿಸಿದನು. ಇವನ ಹಡಗುಪಡೆಯಲ್ಲಿ ಐದು ಸಾವಿರ ಜನರು ನೌಕರರಿದ್ದರು. ಶಿವಾಜಿಯು ಈ

ಹಡಗುಪಡೆಯನ್ನು ಒಳ್ಳೆ ದಕ್ಷತೆಯಿಂದ ರಕ್ಷಿಸುತ್ತಿದ್ದನು. ಯುರೋಪಿಯನರು ಜಲಪರ್ಯಟನದ ಸಾಹಸಗಳನ್ನು ನಡಿಸಿ ಪೃಥ್ವಿಯ ಪರಿಚಯವನ್ನು ಮಾಡಿಕೊಳ್ಳುತ್ತಿರುವ ಈ ಕಾಲದಲ್ಲಿ ಶಿವಾಜಿಯು ನೌಕಾಬಲವನ್ನು ಏರ್ಪಡಿಸಿದ್ದುದು, ಆತನ ರಾಜಕಾರಣ ಪಟುತ್ವವನ್ನು ಸೂಚಿಸುತ್ತದೆ

ಶಿವಾಜಿಯ ನಂತರ, ಇವನ ಮಗ ಸಂಭಾಜಿಯನ್ನು ಔರಂಗಜೇಬನು ಕೊಲ್ಲಿಸಿದನು. ಕೊನೆಯ ರಾಜನಾದ ಶಾಹು ಮಹಾರಾಜನು ಕೊಂಕಣ ಪ್ರಾಂತದಿಂದ ಬಂದ ಬಾಳಾಜಿ ವಿಶ್ವನಾಥ ಭಟ್ಟ ಎಂಬ ಸಮರ್ಥನಾದ ಮನುಷ್ಯನ ಕೈಯಲ್ಲಿ ಆಡಳಿತೆಯನ್ನೊಪ್ಪಿಸಿದನು. ಇವನ ಮನೆತನವು ಪೇಶ್ವೆ ಮನೆತನವೆಂದು ಹೆಸರಾಗಿದೆ.

**ಪೇಶ್ವೆಯರು:—**

ಮೊದಮೊದಲು ಇವರು ಶಿವಾಜಿಯ ಮನೆತನದವರ ಮುಖ್ಯ ಮಂತ್ರಿಗಳೆಂದು ಕಾರಭಾರ ನಡಿಸಿದರು. ೧ನೆಯ ಬಾಜೀರಾಯನು ಬಹು ಪರಾಕ್ರಮದಿಂದ ಮಹಾರಾಷ್ಟ್ರ ರಾಜ್ಯವನ್ನು ಬಹು ಹೆಚ್ಚಾಗಿ ಬೆಳೆಸಿದನು. ಮರಾಠಾ ಸರದಾರರು ಭಾರತದ ಬೇರೆ ಬೇರೆ ಭಾಗಗಳಲ್ಲಿ ಪ್ರಬಲರಾಗತೊಡಗಿದರು. ಭೋಸಲೆ, ಸಿಂಧ್ಯೆ, ಹೋಳಕರ, ಗಾಯಿಕವಾಡ ಮುಂತಾದ ಮನೆತನಗಳು ಹೆಸರಾದವು. ೧ನೆಯ ಬಾಜೀರಾಯನ ಮಗನಾದ ನಾನಾಸಾಹೇಬನ ಕಾಲಕ್ಕೆ ಅಹಮ್ಮದಶಹಾ ಅಬ್ದಾಲಿ ಎಂಬ ಇರಾಣದ ಬಾದಶಹನು ಪಂಜಾಬದಲ್ಲಿ ಕಾಲು ಚಾಚಿದನು. ಇವನಿಗೂ ಪೇಶ್ವೆಯರಿಗೂ ಪಾನಿಪತ್ತದ ನೆರೆಯಲ್ಲಿ ಯುದ್ಧವೆಸಗಿ, ಮರಾಠರು ಸೋತು ಬಲವಾದ ಪೆಟ್ಟು ತಿಂದರು. ಇದೇ ಪಾನಿಪತ್ತದ ೩ನೆಯ ಯುದ್ಧವು. ನಂತರ ಪಟ್ಟವೇರಿದ ಮಾಧವರಾಯನು ಕೆಲವೊಂದು ಗೆಲುವುಗಳನ್ನು ಸಂಪಾದಿಸಿದರೂ, ಮುಂಬರುವ ಗೃಹಕಲಹಗಳು ಪ್ರಬಲವಾದವು. ಈ ಒಳಗಾಗಿ ಪೋರ್ತುಗೀಜ, ಫ್ರೆಂಚ, ಇಂಗ್ಲಿಶ ಮುಂತಾದ ಪರಕೀಯರು ಪ್ರಬಲರಾಗತೊಡಗಿದ್ದರು. ಕ್ರಿ.ಶ. ೧೮೧೮ರಲ್ಲಿ ಇಂಗ್ಲಿಷರಿಂದ ಸೋಲನ್ನೊಪ್ಪಿಕೊಂಡು, ಕೊನೆಯ ಪೇಶ್ವೆಯಾದ ೨ನೆಯ ಬಾಜೀರಾಯನು ರಾಜ್ಯತ್ಯಾಗ ಮಾಡಿದನು.

## ಪ್ರಶ್ನಾವಲಿ.—

(೧) ಪುರಾಣಗಳಲ್ಲಿ ಹೇಳಿದ ಆದರ್ಶರಾಜರ ಅನುಕರಣವನ್ನು ಶಿವಾಜಿಯು ಯಾವರೀತಿಯಲ್ಲಿ ಮಾಡಿದನು ?

(೨) ಶಿವಾಜಿಯ ಆಡಳಿತೆಯ ಮುಖ್ಯ ಲಕ್ಷಣಗಳಾವವು ?

(೩) ಶಿವಾಜಿಯ ನೌಕಾಪಡೆಯು ತಂಗಿದ ಬಂದರಗಳನ್ನು ನಕಾಶದಲ್ಲಿ ಗುರುತಿಸಿರಿ.

(೪) ಶಿವಾಜಿಯ ನೌಕಾಬಲವು ಆ ಕಾಲಕ್ಕೆ ಯಾವ ಮುಖ್ಯ ಕೆಲಸಗಳನ್ನು ನಿರ್ವಹಿಸಿತು ?

## ಇದೇ ಲೇಖಕರ ಬೇರೆ ಪುಸ್ತಕಗಳು.

೧. ಭೂಗೋಲ ಕೈಪಿಡಿ ೧-೦-೦

೨. ಶಿಕ್ಷಣ ಕೈಪಿಡಿ ೧-೦-೦

೩ ಇತಿಹಾಸ ಕೈಪಿಡಿ ಭಾಗ ೨ (ಅಚ್ಚಿನಲ್ಲಿ)

೪. ಭಾರತೀಯ ಇತಿಹಾಸ ದರ್ಶನ

(ಎಸ್. ಎಸ್. ಸಿ. ಪರೀಕ್ಷೆಗಾಗಿ—ಅಚ್ಚಿನಲ್ಲಿ)

ಸಿಗುವ ಸ್ಥಳ:—

ಎಚ್. ಎಸ್. ದೊಡಿಹಳ್ಳಿ,

ಇವರ ನಿವಾಸ ಸ್ಟೇಶನ್ ರೋಡ

ಧಾ ರ ವಾ ಡ.